ಕರ್ನಾಟಕ Vol - 12 April 2013 Issue No. 04 ₹ 5.00/-

# ಸ್ಕೌಟ್ ಮತ್ತು ಗೈಡ್

ವಾರ್ತಾಪತ್ರಿಕೆ

# Karnataka Scout & Guide

*News Magazine*







ಾಂಕ 23 ರಿಂದ 27 ಮಾರ್ಚ್ 2013 ರವರೆಗೆ ಬೆಳಗಾವಿ ಜಿಲ್ಲೆಯ ೀಕಾಕ್‌ನಲ್ಲಿ ನಡೆದ ರಾಜ್ಯ ಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ರಣ ಮತ್ತು ಪರಿಸರ ಅಧ್ಯಯನ ಶಿಬಿರವನ್ನು ರಾಜ್ಯ ಮುಖ್ಯ ುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಹಾಗೂ ಎನ್.ಎಸ್.ಎಫ್ ಣ ಸಂಸ್ಥೆಯ ಆಡಳಿತಾಧಿಕಾರಿಗಳಾದ ಶ್ರೀ ರಾಮಗಾನಟ್ಟಿ ಇವರು ಪ ಬೆಳಗಿಸುವ ಮೂಲಕ ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ಜಿ.ಬಿ. ಮಣ್ಣಿಕೇರಿ, ಜಿಲ್ಲಾ ಆಯುಕ್ತರು(ಸ್ಕೌ), ಶ್ರೀಮತಿ ಲಕ್ಷ್ಮೀ ಮಂಗಿ, ್ಲಾ ಕಾರ್ಯದರ್ಶಿ, ಶಿಬಿರದ ನಾಯಕರಾದ ಕು. ಸುಜಾತಾ ತೊಂಡಿಕಟ್ಟಿ ಗೂ ಇತರರನ್ನು ಕಾಣಬಹುದು.




ದಿನಾಂಕ 27.03.2013ರಂದು ಮೈಸೂರಿನ ಜೆ.ಎಸ್.ಎಸ್. ಕಾಲೇಜಿನಲ್ಲಿ ರೋವರ್ ಘಟಕವನ್ನು ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎಂ.ಎ ಅಬ್ದುಲ್ ಜಮೀಲ್‌ರವರು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಡಾ॥ ಕೆ.ಬಿ. ಗುರುಮೂರ್ತಿ, ಜಿಲ್ಲಾ ಕಾರ್ಯದರ್ಶಿ, ಜೆ.ಎಸ್.ಎಸ್. ಕಾಲೇಜಿನ ಪ್ರಚಾರ್ಯರಾದ ಪ್ರೊ. ಬಿ.ವಿ. ಸಾಂಬಶಿವಯ್ಯ, ಶೈಕ್ಷಣಿಕ ಡೀನ್ ಪ್ರೊ. ಎಂ.ಬಿ.ಮಲ್ಲಿಕಾರ್ಜುನ ಪಂಡಿತ್ ಹಾಗೂ ನೋಡಲ್ ಅಧಿಕಾರಿ ಪ್ರೊ. ಎಂ. ರುದ್ರಯ್ಯ ಇತರರನ್ನು ಕಾಣಬಹುದು.



ೆಳಗಾವಿ ಜಿಲ್ಲೆಯ ಗೋಕಾಕ್‌ನಲ್ಲಿ ನಡೆದ ರಾಜ್ಯ ಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ಚಾರಣ ಮತ್ತು ಪರಿಸರ ಅಧ್ಯಯನ ಶಿಬಿರದ ಉದ್ಘಾಟನಾ ಸಮಾರಂಭದಲ್ಲಿ ಭಾಗವಹಿಸಿದ್ದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಎ.ಎಸ್. ಜೋಡಗೇರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ೋಕಾಕ್, ಶ್ರೀ ಸಿ.ಎಸ್. ರೆಡ್ಡಿ, ಗೌರವ ರಾಜ್ಯ ತರಬೇತಿ ಆಯುಕ್ತರು(ಸ್ಕೌಟ್ಸ್), ಶ್ರೀ ಎಂ.ಎಂ. ಲೋಂಡೆ, ಸಹಾಯಕ ರಾಜ್ಯ ಸ್ಕೌಟ್ಸ್ ಆಯುಕ್ತರು ೆಳಗಾಂ ವಿಭಾಗ), ಶ್ರೀ ಗಜಾನನ ಮಣ್ಣಿಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಬೆಳಗಾಂ ಜಿಲ್ಲಾ ಸ್ಕೌಟ್ಸ್ ಆಯುಕ್ತರು, ಶಿಬಿರದ ನಾಯಕರಾದ ೀ ವಿ.ಎ. ಸಾತ್‌ಪುತೆ ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಚಿತ್ರದಲ್ಲಿ ಕಾಣಬಹುದು.





ದಿನಾಂಕ 23 ರಿಂದ 27 ಮಾರ್ಚ್ 2013 ರವರೆಗೆ ಬೆಳಗಾವಿ ಜಿಲ್ಲೆಯ ಗೋಕಾಕ್‌ನಲ್ಲಿ ನಡೆದ ರಾಜ್ಯ ಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ಚಾರಣ ಮತ್ತು ಪರಿಸರ ಅಧ್ಯಯನ ಶಿಬಿರದಲ್ಲಿ ಸಹಕರಿಸಿದ ಶ್ರೀ ಎ.ಎಸ್. ಜೋಡಗೇರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಎ.ಡಿ.ಸಿ(ಸ್ಕೌ) ಮತ್ತು ಶ್ರೀ ರಾಮಗಾನಟ್ಟಿ, ಆಡಳಿತಾಧಿಕಾರಿಗಳು, ಎನ್.ಎಸ್.ಎಫ್ ಶಿಕ್ಷಣ ಸಂಸ್ಥೆ, ಗೋಕಾಕ್ ಇವರುಗಳನ್ನು ರಾಜ್ಯ ಸಂಸ್ಥೆ ಪರವಾಗಿ ಸನ್ಮಾನಿಸಲಾಯಿತು.





ದಿನಾಂಕ 23 ರಿಂದ 27 ಮಾರ್ಚ್ 2013 ರವರೆಗೆ ಬೆಳಗಾವಿ ಜಿಲ್ಲೆಯ ಗೋಕಾಕ್‌ನಲ್ಲಿ ನಡೆದ ರಾಜ್ಯ ಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ಚಾರಣ ಮತ್ತು ಪರಿಸರ ಅಧ್ಯಯನ ಶಿಬಿರದಲ್ಲಿ ಭಾಗವಹಿಸಿದ ರೋವರ್ಸ್-ರೇಂಜರ್ಸ್‌ಗಳ ವಿಹಾಂಗಮ ನೋಟ.



Participants of State Level "District Training Comissioner's" meet held at Dr. Annie Besant Scouts & Guides State Training & Camping Centre, Doddaballapur from 27th to 28th March 2013.





ದಿನಾಂಕ 03.04.2013ರಂದು ರಾಯಚೂರು ಜಿಲ್ಲಾ ಸಂಸ್ಥೆಯಲ್ಲಿ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್ ಅನುದಾನದ ಅಡಿಯಲ್ಲಿ ಖರೀದಿಸಿದ 'ಕಂಪ್ಯೂಟರ್ ಮತ್ತು ಧ್ವನಿವರ್ಧಕವನ್ನು' ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಶೇಷಗಿರಿರಾವ್ ಕುಲಕರ್ಣಿ, ಜಿಲ್ಲಾ ಆಯುಕ್ತರು(ಸ್ಕೌ), ಶ್ರೀ ಸಿ.ಎಸ್. ರೆಡ್ಡಿ, ಗೌರವ ರಾಜ್ಯ ತರಬೇತಿ ಆಯುಕ್ತರು(ಸ್ಕೌ), ಶ್ರೀ ಟಿ.ಎ. ಮಂಜುನಾಥಾಚಾರ್, ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸಂಘಟನಾ ಆಯುಕ್ತರುಗಳು, ಶ್ರೀಮತಿ ಶೀಲಾ ಸಿದ್ಧರಾಮ್, ಸಹಾಯಕ ರಾಜ್ಯ ಆಯುಕ್ತರು(ಗೈ) ಗುಲ್ಬರ್ಗಾ ವಿಭಾಗ ಹಾಗೂ ಜಿಲ್ಲೆ ಮತ್ತು ಸ್ಥಳೀಯ ಸಂಸ್ಥೆಗಳ ಪದಾಧಿಕಾರಿಗಳನ್ನು ಕಾಣಬಹುದು.

# Editor's Desk.......

*"SCOUTING EDUCATION FOR LIFE" is the theme of forthcoming 1st World Scout Education Congress to be held during November 2013 in Hong Kong organized by WOSM. How simple the theme looks but when attempt to analyze how deep the roots are?*

*Scouting is education informally provided to millions of young people all around the world by respective Governments/NSO's and very well supported by parents, community leaders, public figures and heads of the Governments as well as rulers. It clearly indicates that Scouting has magical qualities which make everyone to respect and accept the concept of the movement. Further the young minds when once they come into its fold will never even attempt to part ways and will continue to be Scouts/Guides in their life time. Further the Scouting/Guiding becomes part of our lives, the reason perhaps that it gives us skills to survive, relaxing, learning, serving and self satisfying activities for all ages with all sort of backgrounds / groups / cultures / economies with same values and basics. Thus these traits become the strong backbone of Scouting as Education for life without losing the century old charm of Promise/ Law and our fundamentals.*

*The committees / conferences / professional cum volunteer's team contribute further to run the progressive stimulating cum challenging programmes on to face the emerging trends and life styles.*

*Today when we stand as Scouts in our societies, everyone knows we are good charactered, well behaved and disciplined group. New emerging needs within our WOSM/ WAGGGS is that even adults who were never Scouts/ Guides in their younger days desire to join and become Scouts/ Guides. Well all this proves getting education has no age limits and everyone has a right to education, and we cannot thus stop the adults to join us.*

*Yes the challenging tough task ahead is managing the inflow with same grace, values and smiles and with touch of professionalism. Yes we are proud to be Scouts/Guides as the world has accepted that we can create a better world and we are the messengers of peace who can provide keys to life with informal education which will have stronger impact then formal education among the generations to come.*

**M.A. KHALID**
*State Secretary*

# ರಾಜ್ಯ ಮುಖ್ಯ ಆಯುಕ್ತರ ನುಡಿ.........................

ಆತ್ಮೀಯರೆ,

ನಾನು ಮಾರ್ಚ್ ಮತ್ತು ಏಪ್ರಿಲ್ ತಿಂಗಳಿನಲ್ಲಿ ಹಲವಾರು ಜಿಲ್ಲಾ ಸಂಸ್ಥೆಗಳಿಗೆ ಭೇಟಿ ನೀಡಿ 2012-13ನೇ ಸಾಲಿನಲ್ಲಿ ಜಿಲ್ಲೆಗಳಲ್ಲಿ ಜರುಗಿರುವ ಕಾರ್ಯಕ್ರಮಗಳು, ರ್‍ಯಾಲಿಗಳು, ತರಬೇತಿಗಳು, ರಾಜ್ಯ ಹಾಗೂ ರಾಷ್ಟೀಯ ಸಂಸ್ಥೆಗಳು ಏರ್ಪಡಿಸಿದ ಕಾರ್ಯಕ್ರಮ-ತರಬೇತಿಗಳಿಗೆ ನಿಯೋಜನೆ ಮಾಡಿರುವ ಬಗ್ಗೆ, ಜಿಲ್ಲೆಯಲ್ಲಿರುವ ವೃಕ್ಷಮಣಿದಾರಿಗಳನ್ನು Pre-ALT/ALT/LT ತರಬೇತಿಗಳಿಗೆ ಹೆಚ್ಚಿನ ತರಬೇತಿ ಹಾಗೂ ಜ್ಞಾನಾರ್ಜನೆಗೆ ಕಳುಹಿಸಿಕೊಡುವ ಬಗ್ಗೆ, ಪ್ರತಿವರ್ಷ ತಪ್ಪದೇ ಮೂಲ ತರಬೇತಿ ಕಾರ್ಯಕ್ರಮವನ್ನು ಸರ್ವಶಿಕ್ಷಣ ಅಭಿಯಾನ ಮೂಲಕವಾಗಲಿ (ಜಿಲ್ಲಾ ಡಯಟ್ ಸಂಸ್ಥೆಗಳ ಮುಖೇನ) ಅಥವಾ ಜಿಲ್ಲೆಗಳ ಸಾರ್ವಜನಿಕ ಶಿಕ್ಷಣ ಇಲಾಖೆಗಳ ಉಪನಿರ್ದೇಶಕರುಗಳು ನೀಡುವ ಸುತ್ತೋಲೆಗಳ ಮುಖೇನ ಕಡ್ಡಾಯವಾಗಿ ಏರ್ಪಡಿಸಲೇಬೇಕೆಂಬುದನ್ನು ಜಿಲ್ಲಾ ಸಂಸ್ಥೆಗಳ ಸಹೋದ್ಯೋಗಿಗಳ ಗಮನಕ್ಕೆ ತಂದಿರುತ್ತೇನೆ.

ಹೋದ ತಿಂಗಳ 22 ಮಾರ್ಚ್‌ನಿಂದ 25ರವರೆವಿಗೆ ತುಮಕೂರು-ಚಿತ್ರದುರ್ಗ-ದಾವಣಗೆರೆ, ಹಾವೇರಿ, ಧಾರವಾಡ, ಗೋಕಾಕ್ (ಬೆಳಗಾಂ ಜಿಲ್ಲೆ) ಬಾಗಲಕೋಟೆ-ಬಿಜಾಪುರ-ಗದಗ ಜಿಲ್ಲಾ ಸಂಸ್ಥೆಗೆ ಭೇಟಿ ನೀಡಿ ಮೇಲ್ಕಂಡ ವಿಷಯಗಳ ಬಗ್ಗೆ ಚರ್ಚಿಸಿ ಸೂಕ್ತ ಸಲಹೆ-ಸೂಚನೆಗಳನ್ನು ನೀಡಿರುತ್ತೇನೆ. ಮೇಲ್ಕಂಡ ಜಿಲ್ಲೆಗಳಿಗೆ ಭೇಟಿನೀಡಿದಾಗ ನನ್ನೊಂದಿಗೆ ಗೌರವ ರಾಜ್ಯ ತರಬೇತಿ ಆಯುಕ್ತರಾದ ಶ್ರೀ ಚಿನ್ನಸ್ವಾಮಿರೆಡ್ಡಿಯವರು ಸಕ್ರಿಯವಾಗಿ ಭಾಗವಹಿಸಿ ರಾಜ್ಯ ಹಾಗೂ ರಾಷ್ಟೀಯ ತರಬೇತಿಗಳ ಬಗ್ಗೆ, ಪ್ರಧಾನಮಂತ್ರಿಗಳ ಪಾರಿತೋಷಕಕ್ಕೆ ಅರ್ಜಿ ಸಲ್ಲಿಸುವ ವಿವರಗಳ ಬಗ್ಗೆ, ರಾಷ್ಟ್ರಪತಿ ಪುರಸ್ಕಾರಕ್ಕೆ ತಯಾರು ಮಾಡುತ್ತಿರುವ ಸ್ಕೌಟರ್ಸ್-ಗೈಡರ್ಸ್‌ಗಳು ಅವಶ್ಯವಾಗಿ ನಿರ್ವಹಿಸಬೇಕಾದ ವಿವರಗಳನ್ನು ಸ್ಪಷ್ಟೀಕರಿಸಿ ಹಾಗೂ ಸಭೆಯಲ್ಲಿ ಭಾಗವಹಿಸಿದವರಿಗೆ ಇದ್ದಂತಹ ಹಲವಾರು ಸಂದೇಹ-ಪ್ರಶ್ನೆಗಳಿಗೆ ಸೂಕ್ತ ಸಲಹೆ-ಮಾಹಿತಿ-ವಿವರಗಳನ್ನು ನೀಡಿದರು.

ಬೆಳಗಾಂ ಜಿಲ್ಲೆ ಗೋಕಾಕ್‌ನಲ್ಲಿ ಜರುಗಿದ ರಾಜ್ಯಮಟ್ಟದ ರೋವರ್ಸ್-ರೇಜರ್ಸ್‌ಗಳ ಚಾರಣ ಹಾಗೂ ಪರಿಸರ ಅಧ್ಯಯನ ಶಿಬಿರದ ಚಟುವಟಿಕೆಗಳ ಉದ್ಘಾಟನಾ ಸಮಾರಂಭದಲ್ಲಿ ದಿನಾಂಕ 23 ಮಾರ್ಚ್ 2013 ರಂದು ಭಾಗವಹಿಸಿ ರಾಜ್ಯದ ಹಲವಾರು ಜಿಲ್ಲೆಗಳಿಂದ ಮೇಲ್ಕಂಡ ರಾಜ್ಯಮಟ್ಟದ ಕಾರ್ಯಕ್ರಮದಲ್ಲಿ ಭಾಗವಹಿಸಿದ 167 ರೋವರ್ಸ್-ರೇಂಜರ್ಸ್‌ಗಳಿಗೆ, ಸಂಬಂಧಪಟ್ಟ ಜಿಲ್ಲೆಗಳಿಗೆ ಹಾಗೂ ಅವರುಗಳು ಪ್ರತಿನಿಧಿಸಿದ ಕಾಲೇಜುಗಳ ರೋವರ್ಸ್-ರೇಂಜರ್ಸ್‌ಗಳ ನಾಯಕ-ನಾಯಕಿಯರುಗಳಿಗೆ ಅಭಿನಂದನೆ ಸಲ್ಲಿಸಿ, ರಾಜ್ಯಮಟ್ಟದ ಕಾರ್ಯಕ್ರಮವನ್ನು ಯಶಸ್ವಿಗೊಳಿಸಲು ಸಹಕರಿಸಿದ ಬೆಳಗಾಂ ಜಿಲ್ಲಾ ಸಂಸ್ಥೆಯ ಹಾಗೂ ಗೋಕಾಕ್ ಸ್ಥಳೀಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳಿಗೆ, ಚಾರಣ ಶಿಬಿರದ ನಾಯಕತ್ವ ವಹಿಸಿದ ರೋವರ್ ವಿಭಾಗದ ನಾಯಕ ಶ್ರೀ ವಿ.ಎಸ್. ಸಾತ್‌ಪುತೆ ಹಾಗು ರೇಂಜರ್ ವಿಭಾಗದ ನಾಯಕಿ ಶ್ರೀಮತಿ ಸುಜಾತ ಲೊಂಡಿಗಟ್ಟಿ ಹಾಗು ಕಾರ್ಯಕ್ರಮ ಅತ್ಯಂತ ಯಶಸ್ವಿಯಾಗಿ ಜರುಗುವಲ್ಲಿ ಸಹಕರಿಸಿದ ಜಾರಕಿಹೋಳಿ ಶಿಕ್ಷಣ ಸಂಸ್ಥೆಗಳ ಪದಾಧಿಕಾರಿಗಳಿಗೆ, ಶಿಕ್ಷಕರಿಗೆ – ಕೆ.ಎಲ್.ಇ. ಹಾಗೂ ಇತರ ಸಂಘ-ಸಂಸ್ಥೆಗಳ ಎಲ್ಲಾ ಪದಾಧಿಕಾರಿಗಳಿಗೆ, ಶಿಕ್ಷಣ ಇಲಾಖೆಯ ಹಿರಿಯ ಅಧಿಕಾರಿಗಳಾದ ಶ್ರೀ ಗಜಾನನ ಮನ್ನಿಕೇರಿ,

ಜಿಲ್ಲಾ ಸ್ಕೌಟ್ ಆಯುಕ್ತರು, ಬೆಳಗಾಂ ಹಾಗೂ ಗೋಕಾಕ್ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಎ.ಎಸ್. ಜೊಡಗೇರಿ, ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿಗಳಾದ ಶ್ರೀ ವಿ.ಎಂ. ಸೂಲಿಗಾವಿ, ಜಿಲ್ಲಾ ಸಂಸ್ಥೆಯ ಸಂಘಟಕರುಗಳಾದ ಶ್ರೀ ನಾಗೇಶ ಶಿವಪೂರ ಹಾಗೂ ಶ್ರೀ ಡಿ.ಬಿ. ಅತ್ತಾರ್, ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಲಕ್ಷ್ಮಿಮಂಗಿ, ಸಹಾಯಕರುಗಳಾಗಿ ಕರ್ತವ್ಯ ನಿರ್ವಹಿಸಿದ ಶ್ರೀ ಕೆ.ಎಸ್. ಪ್ರತಿಮ್‌ಕುಮಾರ್, ಡಾ. ಕೆ.ನಾರಾಯಣಸ್ವಾಮಿ, ಶ್ರೀಮತಿ ಎನ್.ಕೆ. ಛಾಯ, ಭಾರತಿ ಡಯಾಸ್ ಹಾಗು ಚಾರಣ ಶಿಬಿರದ ನೇತೃತ್ವ ಮತ್ತು ಮಾರ್ಗದರ್ಶನ ಮಾಡಿದ ರಾಜ್ಯ ಸಂಸ್ಥೆಯ ಸಂಘಟಕರುಗಳಾದ ಶ್ರೀಮತಿ ಜಾನಕಿ ವೇಣುಗೋಪಾಲ್ ಮತ್ತು ಶ್ರೀ ಟಿ.ಎ. ಮಂಜುನಾಥಾಚಾರ್ ಅವರುಗಳಿಗೆ ರಾಜ್ಯ ಸಂಸ್ಥೆಯ ಪರವಾಗಿ ಅಭಿನಂದನೆ ಸಲ್ಲಿಸಿ ಎಲ್ಲರಿಗೂ ಶುಭಕೋರಿದ್ದೇನೆ.

ಹಾವೇರಿ ಮತ್ತು ಗದಗ ಜಿಲ್ಲೆಗಳ ಪದಾಧಿಕಾರಿಗಳೊಂದಿಗೆ ಜಿಲ್ಲೆಯಲ್ಲಿನ ಮೂಲಭೂತ ಸೌಕರ್ಯಗಳ ಬಗ್ಗೆ ಸವಿಸ್ತಾರವಾಗಿ ಚರ್ಚಿಸಿ ರಾಜ್ಯ ಸರ್ಕಾರ ನೀಡಿರುವ ನೆರವಿನ ಹಣವನ್ನು ತಕ್ಷಣವೇ ಉಪಯೋಗಿಸಿ ವಿವರಗಳನ್ನು ರಾಜ್ಯ ಸಂಸ್ಥೆಗೆ ಸಲ್ಲಿಸಲು ಸೂಚಿಸಿದ್ದೇನೆ. ಹಾವೇರಿಯಲ್ಲಿ ಇತ್ತೀಚೆಗೆ ಜಿಲ್ಲಾಧಿಕಾರಿಗಳು ಜಿಲ್ಲಾ ಸಂಸ್ಥೆಗೆ ನೀಡಿರುವ ಜಾಗಕ್ಕೆ ಭೇಟಿನೀಡಿ ಮುಂದಿನ ಎರಡು ತಿಂಗಳಲ್ಲಿ ಕಟ್ಟಡದ ಕಾಮಗಾರಿಯನ್ನು ಪ್ರಾರಂಭಿಸಲು ಸೂಚಿಸಿದ್ದೇನೆ.

ಬಾಗಲಕೋಟೆ ಜಿಲ್ಲೆಯಲ್ಲಿ ಈಗಾಗಲೇ ಪ್ರಾರಂಭಿಸಿರುವ ಕಟ್ಟಡದ ನಿರ್ಮಾಣ ಕಾರ್ಯವನ್ನು ಲೋಕಸಭಾ ಸದಸ್ಯರ, ವಿಧಾನಸಭೆ-ವಿಧಾನ ಪರಿಷತ್ ಸದಸ್ಯರುಗಳ ಸ್ಥಳೀಯ 'ಅಭಿವೃದ್ಧಿ ನಿಧಿಯಿಂದ ಪಡೆದು' ಆದಷ್ಟು ಜಾಗ್ರತೆ ಮುಗಿಸಲು ಪದಾಧಿಕಾರಿಗಳಿಗೆ ಮನವಿ ಮಾಡಿದ್ದೇನೆ. ವಿಜಾಪುರ ಜಿಲ್ಲೆಯವರು, ನಗರಕ್ಕೆ ಸಮೀಪದ ಬುರಾಣಾಪುರದಲ್ಲಿ ಸರ್ಕಾರದಿಂದ ಪಡೆದಿರುವ 15 ಎಕರೆ ಪ್ರದೇಶದಲ್ಲಿ ನಿರ್ಮಾಣ ಮಾಡಲಿರುವ "ಬಿಜಾಪುರ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಮತ್ತು ಶಿಬಿರ ಕೇಂದ್ರಕ್ಕೆ" ಪದಾಧಿಕಾರಿಗಳೊಂದಿಗೆ ಭೇಟಿ ನೀಡಿ ಸೂಕ್ತ ಸಲಹೆಗಳನ್ನು ನೀಡಿರುತ್ತೇನೆ. ನಾನು ಭೇಟಿ ನೀಡಿದ ಒಂಭತ್ತು ಜಿಲ್ಲಾ ಸಂಸ್ಥೆಗಳಲ್ಲಿ ನಾನು ಮತ್ತು ಗೌರವ ರಾಜ್ಯ ಸ್ಕೌಟ್ಸ್ ತರಬೇತಿ ಆಯುಕ್ತರು ಪ್ರಸ್ತಾಪಿಸಿದ ಮುಖ್ಯ ವಿಷಯ ಇತ್ತೀಚೆಗೆ ರಾಷ್ಟ್ರೀಯ ಸಂಸ್ಥೆಯವರು ತರಬೇತಿ ವಿಭಾಗದಲ್ಲಿ ಮಾಡಿರುವ ಅಮೂಲಾಗ್ರ ಬದಲಾವಣೆ ಮತ್ತು ಪರತ್ತುಗಳನ್ನು ಭಾಗವಹಿಸಿದವರುಗಳ ಗಮನಕ್ಕೆ ತಂದಿದ್ದೇವೆ.

**ರಾಜ್ಯದ ಎಲ್ಲಾ ವೃಕ್ಷಮಣಿಧಾರಿಗಳ, ಪ್ರಿ.-ಎ.ಎಲ್.ಟಿ.ಗಳ/ಎ.ಎಲ್.ಟಿ.ಗಳ/ಎಲ್.ಟಿ.ಗಳ ಹಾಗೂ ಜಿಲ್ಲೆಗಳಲ್ಲಿನ ಜಿಲ್ಲಾ ತರಬೇತಿ ಆಯುಕ್ತರುಗಳ/ಜಿಲ್ಲೆಗಳಲ್ಲಿನ ವಿವಿಧ ವಿಭಾಗದ ಜಿಲ್ಲಾ ಸಂಘಟನಾ ಆಯುಕ್ತರುಗಳ ವಿಶೇಷ ಗಮನಕ್ಕೆ ಮತ್ತು ಸೂಕ್ತ ಕ್ರಮಕ್ಕೆ ನನ್ನ ವಿಶೇಷ ಮನವಿ.**

ಇವುಗಳಲ್ಲಿ ಅತಿಮುಖ್ಯವಾದುದು - 65 ವರ್ಷ ವಯಸ್ಸು ಮೀರಿದವರು. ಸಹಾಯಕ/ನಾಯಕ ತರಬೇತುದಾರರಾಗಿದ್ದಲ್ಲಿ ಅವರುಗಳು ಮುಂದುವರೆಯಬೇಕಾದರೆ ಅವರುಗಳು ದೈಹಿಕ ಹಾಗು ಮಾನಸಿಕವಾಗಿ ತಮ್ಮಗಳ ಕರ್ತವ್ಯ /ಜವಾಬ್ದಾರಿಯನ್ನು ನಿರ್ವಹಿಸಲು ಸಮರ್ಥರಿದ್ದಾರೆಂದು ರಾಜ್ಯ ಆಯುಕ್ತರುಗಳು, ಸ್ಕೌಟ್ಸ್-ಗೈಡ್ಸ್ ಅಥವಾ ರಾಜ್ಯ ಮುಖ್ಯ ಆಯುಕ್ತರು ಪ್ರಮಾಣಪತ್ರ ನೀಡಿದಲ್ಲಿ ಮಾತ್ರ ಅಂತಹ ನಾಯಕ/ನಾಯಕಿಯರುಗಳನ್ನು ಅವರುಗಳ ವಯಸ್ಸು 75 ಆಗುವವರೆವಿಗೆ ಮುಂದುವರಿಸಬಹುದೆಂಬ ವಿಚಾರವನ್ನು ಎಲ್ಲರ ಗಮನಕ್ಕೆ ತಂದಿರುತ್ತೇವೆ. ಅದಲ್ಲದೆ ಈ ಹಿಂದೆ ರಾಜ್ಯದಲ್ಲಿದ್ದ 150ಕ್ಕೂ ಹೆಚ್ಚಿನ ಸ್ಕೌಟ್ಸ್-ಗೈಡ್ಸ್ ವಿಭಾಗಗಳ ತರಬೇತಿ ಸಹಾಯಕ ನಾಯಕ/ ತರಬೇತಿ ನಾಯಕರುಗಳು ಹಾಗೂ ಸಹಾಯಕ ತರಬೇತಿ ನಾಯಕಿ-ತರಬೇತಿ ನಾಯಕಿಯರುಗಳಲ್ಲಿ ಬಹಳಷ್ಟು

ತರಬೇತುದಾರರು ವೈಯಕ್ತಿಕ ಕಾರಣಗಳಿಂದ ಪುನಶ್ಚೇತನ ತರಬೇತಿಗೆ ಹಾಜರಾಗದ ಕಾರಣ ಹಾಗು ರಾಷ್ಟ್ರೀಯ ಸಂಸ್ಥೆಯ ನಿಯಮಾವಳಿಗಳ ಪ್ರಕಾರ ಹಲವು ಅತ್ಯವಶ್ಯಕ ತರಬೇತಿಗಳಲ್ಲಿ ನಾಯಕರಾಗಿ-ಸಹಾಯಕರಾಗಿ ಸೇವೆ ಸಲ್ಲಿಸಿದ ಕಾರಣ ಹಾಗು 75 ವರ್ಷ ವಯಸ್ಸು ಮೀರದ ಕಾರಣ, ರಾಷ್ಟ್ರೀಯ ಸಂಸ್ಥೆಯಲ್ಲಿನ ತರಬೇತಿ ನಾಯಕ/ನಾಯಕಿ-ಸಹಾಯಕ ತರಬೇತುದಾರರ ಪಟ್ಟಿಯಿಂದ ಕೈಬಿಟ್ಟಿರುವುದಾಗಿ ತರಬೇತಿ ವಿಭಾಗದ ಉಪನಿರ್ದೇಶಕರಿಂದ ರಾಷ್ಟ್ರೀಯ ತರಬೇತಿ ಕೇಂದ್ರ, ಪಚಮಡಿ ಯಿಂದ ರಾಜ್ಯ ಸಂಸ್ಥೆಗೆ ಇತ್ತೀಚೆಗೆ ಪತ್ರ ಬಂದಿರುತ್ತದೆ.

ಮೇಲ್ಕಂಡ ಎಲ್ಲಾ ಕಾರಣಗಳಿಂದ ರಾಜ್ಯ ಸಂಸ್ಥೆಯಲ್ಲಿ 2012-13ರ ಸಾಲಿನಲ್ಲಿ ಸ್ಕೌಟ್ ತರಬೇತಿ ವಿಭಾಗದಲ್ಲಿ 42 ಸಹಾಯಕ ತರಬೇತಿ ನಾಯಕರುಗಳು ಹಾಗೂ 28 ತರಬೇತಿ ನಾಯಕರುಗಳಿದ್ದಾರೆ. ಗೈಡ್ ವಿಭಾಗದಲ್ಲಿ 30 ಸಹಾಯಕ ತರಬೇತಿ ನಾಯಕಿಯರುಗಳು ಹಾಗೂ 7 ತರಬೇತಿ ನಾಯಕಿಯರುಗಳಿದ್ದಾರೆ. ಹಲವು ಜಿಲ್ಲೆಗಳಲ್ಲಿ ಎರಡೂ ವಿಭಾಗಗಳಲ್ಲಿ ತರಬೇತಿ ನಾಯಕ/ನಾಯಕಿ ಇಲ್ಲದಿರುವುದು ನಿಜಕ್ಕೂ ದುಃಖಕರ. ಆದುದರಿಂದ ಸ್ಥಳೀಯ ಸಂಸ್ಥೆಗಳು-ಜಿಲ್ಲಾ ಸಂಸ್ಥೆಗಳು-ರಾಜ್ಯ ಸಂಸ್ಥೆ ಈ ಬಗ್ಗೆ ವಿಶೇಷ ಗಮನ ಹರಿಸಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವೃಕ್ಷಮಣಿದಾರಿಗಳು ಪ್ರೀ-ಎ.ಎಲ್.ಟಿ., ಎ.ಎಲ್.ಟಿ. ಮತ್ತು ಎಲ್.ಟಿ.ಗಳು ಇರಲೇಬೇಕೆಂಬ ಚಿಂತನೆಯೊಂದಿಗೆ ಒಂದು ನಿರ್ದಿಷ್ಟ ಅವಧಿಯೊಳಗೆ ನಮ್ಮಗಳೆಲ್ಲರ ಆಸೆ-ಆಕಾಂಕ್ಷೆ ಈಡೇರುವತ್ತ ಸೂಕ್ತ ಕ್ರಿಯಾಯೋಜನೆ ಸಿದ್ಧಪಡಿಸಿ ಅನುಷ್ಠಾನಗೊಳಿಸಬೇಕಾದ್ದು ನಮ್ಮಗಳೆಲ್ಲರ ಆದ್ಯ ಕರ್ತವ್ಯ ಮತ್ತು ಜವಾಬ್ದಾರಿ ಎಂಬುದನ್ನು ನನ್ನೆಲ್ಲ ಸಹೋದ್ಯೋಗಿ ಮಿತ್ರರಲ್ಲಿ ಭಿನ್ನವಿಸುತ್ತೇನೆ. ಈ ಬಗ್ಗೆ ರಾಜ್ಯ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ರಾಜ್ಯ ತರಬೇತಿ ಆಯುಕ್ತರುಗಳು/ರಾಜ್ಯ ಸಂಘಟನಾ ಆಯುಕ್ತರುಗಳು/ ಜಿಲ್ಲೆಗಳಲ್ಲಿ ಕರ್ತವ್ಯದಲ್ಲಿರುವ ಜಿಲ್ಲಾ ತರಬೇತಿ ನಾಯಕ/ನಾಯಕಿಯರುಗಳು, ಎಎಸ್‌ಓಸಿಗಳು, ಡಿಓಸಿಗಳು, ಜಿಲ್ಲಾ ಸಂಘಟಕರುಗಳು ಇನ್ನೂ ಹೆಚ್ಚಿನ ಮುತುವರ್ಜಿ ವಹಿಸಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಹೆಚ್ಚಿನ ತರಬೇತಿ ಪಡೆಯಲು ಅರ್ಹರಿರುವ ದಳನಾಯಕ/ನಾಯಕಿಯರುಗಳನ್ನು ಹುರಿದುಂಬಿಸಿ ಸೂಕ್ತ ಮಾರ್ಗದರ್ಶನ ನೀಡಿ ಅವರುಗಳನ್ನು ಸಹಾಯಕ ತರಬೇತಿ ನಾಯಕ/ನಾಯಕಿಯಾಗಲು ತರಬೇತಿ ನಾಯಕ/ನಾಯಕಿಯಾಗಲು ರಾಷ್ಟ್ರೀಯ ತರಬೇತಿ ಸಂಸ್ಥೆ ಪಚಮಡಿ ಮಧ್ಯಪ್ರದೇಶಕ್ಕೆ ಕಳುಹಿಸುವಲ್ಲಿ ಸಫಲರಾಗಬೇಕೆಂದು ಸೂಚಿಸುತ್ತೇನೆ. ಇದನ್ನು ನಿರ್ವಹಿಸಲು ಯಾವುದೇ ಅನಾನುಕೂಲಗಳಿದ್ದಲ್ಲಿ ಸೂಕ್ತ ಮಾರ್ಗದರ್ಶನ ಹಾಗು ಸಲಹೆ-ಸಹಾಯ-ಸಹಕಾರ ಬೇಕಾದಲ್ಲಿ ರಾಜ್ಯ ಸಂಸ್ಥೆಯ ಹಿರಿಯ ತರಬೇತುದಾರರು ಈಗಾಗಲೇ ಜಿಲ್ಲೆಗಳಲ್ಲಿ ರಾಜ್ಯ ಸಂಸ್ಥೆಯ ಕೋಆರ್ಡಿನೇಟರ್‌ಗಳಾಗಿ ಕರ್ತವ್ಯ ನಿರ್ವಹಿಸುತ್ತಿರುವ ರಾಜ್ಯದ ಹಿರಿಯ-ನುರಿತ-ಅನುಭವಿ ಸ್ಕೌಟ್ಸ್-ಗೈಡ್ಸ್ ವಿಭಾಗಗಳ ಹಿರಿಯರನ್ನು ಸಂಪರ್ಕಿಸಿ ಅವರುಗಳ ಸಲಹೆ-ಸೂಚನೆ ಪಡೆದು ನಿಮ್ಮ ಜಿಲ್ಲೆಗಳ ತರಬೇತಿ ವಿಭಾಗದ ನಾಯಕ/ನಾಯಕಿಯರ ಸಂಖ್ಯೆಯನ್ನು ಹೆಚ್ಚಿಸುವ ಮುಖೇನ ಸಂಸ್ಥೆಯ ಸರ್ವಾಂಗೀಣ ಬೆಳವಣಿಗೆ ಹಾಗೂ ಚಳವಳಿಯ ಅಭಿವೃದ್ಧಿಗೆ ಸಹಕರಿಸಬೇಕಾಗಿ ಸೂಚಿಸುತ್ತೇನೆ.

ಈ ತಿಂಗಳ 2ರಿಂದ 5ನೇ ತಾರೀಖಿನವರೆಗೆ ಬಳ್ಳಾರಿ, ಕೊಪ್ಪಳ, ರಾಯಚೂರು, ಯಾದಗಿರಿ-ಗುಲ್ಬರ್ಗ ಹಾಗು ಬೀದರ್ ಜಿಲ್ಲೆಗಳಿಗೆ ಭೇಟಿ ನೀಡಿ ಜಿಲ್ಲೆಗಳ ಅಭಿವೃದ್ಧಿ-ಬೆಳವಣಿಗೆಗೆ ಅವಶ್ಯಕವಾದ ವಿಚಾರಗಳನ್ನು ಚರ್ಚಿಸಿದ್ದೇನೆ. ನನ್ನೊಂದಿಗೆ ಗೌರವ ರಾಜ್ಯ ಸ್ಕೌಟ್ಸ್ ತರಬೇತಿ ಆಯುಕ್ತ ಶ್ರೀ ಸಿ.ಎಸ್.ರೆಡ್ಡಿ, ರಾಜ್ಯ ಗೈಡ್ಸ್ ಸಂಘಟನಾ ಆಯುಕ್ತೆ ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸ್ಕೌಟ್ಸ್ ಸಂಘಟನಾ ಆಯುಕ್ತ ಶ್ರೀ ಟಿ.ಎ. ಮಂಜುನಾಥಾಚಾರ್ ಅವರುಗಳು ಎಲ್ಲಾ ಆರು ಜಿಲ್ಲೆಗಳ ಸಭೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಸೂಕ್ತ ಸಲಹೆ-ಸೂಚನೆ, ಮಾರ್ಗದರ್ಶನ ಮಾಡಿರುತ್ತಾರೆ. ಎಲ್ಲ ಜಿಲ್ಲೆಗಳಲ್ಲಿಯೂ ಚಳವಳಿಯ ಬೆಳವಣಿಗೆಗೆ ಜಿಲ್ಲೆಗಳಲ್ಲಿನ ಸಾರ್ವಜನಿಕ ಶಿಕ್ಷಣ ಇಲಾಖೆಯ

ಉಪನಿರ್ದೇಶಕರುಗಳಿಂದ, ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ, ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳಿಂದ ಹಾಗು ಜಿಲ್ಲಾ ಸಂಸ್ಥೆ ಹಾಗು ಸ್ಥಳೀಯ ಸಂಸ್ಥೆಗಳ ಪದಾಧಿಕಾರಿಗಳಿಂದ ಚಳವಳಿಯ ಬೆಳವಣಿಗೆಗೆ ಉತ್ತಮ ಸ್ಪಂದನೆ ದೊರಕಿದೆ.

ಗುಲಬರ್ಗ ಮತ್ತು ಬೀದರ್ ಜಿಲ್ಲೆಗಳಲ್ಲಿ ಇದುವರೆವಿಗೂ ನಮ್ಮದೇ ಆದ ಕಟ್ಟಡ–ತರಬೇತಿ ಕೇಂದ್ರ ಆಗದಿರುವುದು ನನಗೆ ತೃಪ್ತಿಕರವಾಗಿಲ್ಲ. ಬೀದರ್ ಜಿಲ್ಲೆಯಲ್ಲಿ ಜಿಲ್ಲೆಯ ಜಿಲ್ಲಾಧಿಕಾರಿಗಳಾದ ಶ್ರೀ ಪಿ.ಸಿ.ಜಾಫರ್ ಅವರನ್ನು ನಾವು ಮತ್ತು ಪದಾಧಿಕಾರಿಗಳು ಭೇಟಿ ಮಾಡಿ ಜಿಲ್ಲಾ ಸಂಸ್ಥೆಯ ಕಟ್ಟಡ ನಿರ್ಮಾಣಕ್ಕೆ ಸೂಕ್ತ ಸ್ಥಳವನ್ನು ದೊರಕಿಸಿ ಕೊಡಬೇಕೆಂಬ ನಮ್ಮಗಳ ಕೋರಿಕೆಗೆ ಜಿಲ್ಲಾಧಿಕಾರಿಗಳಿಂದ ಉತ್ತಮ ಸ್ಪಂದನೆ ಸಿಕ್ಕಿದ್ದು ಮಹಾಚುನಾವಣೆ ನಂತರ ಈ ಬಗ್ಗೆ ಸ್ಪಷ್ಟ ತೀರ್ಮಾನವಾಗುವುದೆಂಬ ನಂಬಿಕೆ ನನಗಿದೆ. ಗುಲ್ಬರ್ಗಾ ವಿಭಾಗದ ಸಹಾಯಕ ರಾಜ್ಯ ಗೈಡ್ಸ್ ಆಯುಕ್ತರಾದ ಡಾ. ಶೀಲಾ ಸಿದ್ದರಾಮ್ ಮೇಲ್ಕಂಡ ಸಭೆಗಳಲ್ಲಿ ಭಾಗವಹಿಸಿದರು. ಈಗಾಗಲೇ ಗುಲ್ಬರ್ಗ ಪಟ್ಟಣದ ಬಳಿ ನಮಗೆ ದೊರೆತಿರುವ 2 ಎಕರೆ ಜಾಗದಲ್ಲಿ ಮಹಾಚುನಾವಣೆಯ ನಂತರ ನಿರ್ಮಾಣ ಕಾಮಗಾರಿಯನ್ನು ಪ್ರಾರಂಭಿಸುವ ಬಗ್ಗೆ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ನೀಡಿರುವ ಆಶ್ವಾಸನೆಯನ್ನು ಪೂರೈಸುತ್ತಾರೆಂಬ ಭರವಸೆ ಹೊಂದಿದ್ದೇನೆ.

ಈ ತಿಂಗಳ 25ರಿಂದ 30ರವರೆವಿಗೆ ಅಂಡಮಾನ್–ನಿಕೋಬಾರ್‌ನ ಪೋರ್ಟ್‌ಬ್ಲೇರ್‌ನಲ್ಲಿ ಜರುಗಲಿರುವ ರಾಜ್ಯದ ತರಬೇತಿ ನಾಯಕ–ನಾಯಕಿಯರುಗಳ ಸಮಾವೇಶ ಹಾಗು ನಂತರ ಜರುಗಲಿರುವ ತರಬೇತಿ ನಾಯಕರುಗಳ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿರುವ 51 ಸಹಾಯಕ ಮತ್ತು ನಾಯಕ ತರಬೇತುದಾರರು, 20 ಜನ ಸಹಾಯಕ ತರಬೇತಿ ನಾಯಕಿಯರು ಮತ್ತು ತರಬೇತಿ ನಾಯಕಿಯರುಗಳಲ್ಲಿ ನನ್ನ ಕೋರಿಕೆ "ದೇಶ ಸುತ್ತಬೇಕು–ಕೋಶ ಓದ್ಬೇಕು" ಎಂಬ ನಾಣ್ನುಡಿಯಂತೆ ತಾವುಗಳು ತರಬೇತಿ ನಾಯಕ–ನಾಯಕಿಯರುಗಳ ಸಮಾವೇಶದಲ್ಲಿ ಭಾಗವಹಿಸಿ ಸ್ವ–ಸ್ಥಳಗಳಿಗೆ ವಾಪಸ್ಸಾದ ನಂತರ, ನಿಮ್ಮ ಜಿಲ್ಲೆಯಲ್ಲಿನ ಹಿರಿ–ಕಿರಿಯ ತರಬೇತುದಾರರನ್ನು ಒಂದೆಡೆ ಸೇರಿಸಿ, ರಾಷ್ಟ್ರೀಯ ಸಂಸ್ಥೆಯವರು ಇತ್ತೀಚೆಗೆ ಮಾರ್ಪಡಿಸಿರುವ ಬದಲಾವಣೆಗಳ ಬಗ್ಗೆ ಅವರುಗಳ ಗಮನ ಸೆಳೆದು ಅವರುಗಳಲ್ಲಿ ಅರ್ಹರಿರುವ ಅಭ್ಯರ್ಥಿಗಳನ್ನು ಹೆಚ್ಚಿನ ತರಬೇತಿಗೆ ಕಳುಹಿಸಿ, ಜಿಲ್ಲೆಗಳಲ್ಲಿ ಈಗಾಗಲೇ ತಲೆದೋರಿರುವ ತರಬೇತಿನಾಯಕರುಗಳ/ನಾಯಕಿಯರುಗಳ ಕೊರತೆಯನ್ನು ನೀಗಿಸಲು ಪ್ರಾಮಾಣಿಕ ಪ್ರಯತ್ನಪಡಬೇಕೆಂದು ಕೋರುತ್ತೇನೆ. ಈ ಬಗ್ಗೆ ನಿಮ್ಮ ನೆರವಿಗೆ ಬರಲು ರಾಜ್ಯ ಸಂಸ್ಥೆಯ ತರಬೇತಿ/ಸಂಘಟನೆಗಳ ಮುಖ್ಯಸ್ಥರುಗಳು ಸಿದ್ದರಿದ್ದಾರೆಂಬುದನ್ನು ನಿಮ್ಮ ಗಮನಕ್ಕೆ ತರಬಯಸುತ್ತೇನೆ.

2013–14 ವರ್ಷ ಪ್ರಾರಂಭವಾಗಿದೆ. ಯೋಜಿತ ಚಟುವಟಿಕೆಗಳು, ರ್‍ಯಾಲಿಗಳು/ಸಮುದಾಯ ಅಭಿವೃದ್ಧಿ ಯೋಜನೆಗಳು, ಮೂಲತರಬೇತಿ ಕಾರ್ಯಕ್ರಮಗಳನ್ನು 2012–13ನೇ ಸಾಲಿನಲ್ಲಿ ಅನಿವಾರ್ಯ ಕಾರಣಗಳಿಂದ ಮಾಡಲಾಗಲಿಲ್ಲವೋ ಅವುಗಳನ್ನು ಆಯೋಜಿಸಿ ಪೂರ್ತಿಗೊಳಿಸುವಲ್ಲಿ ದಯಾಮಯನಾದ ಭಗವಂತನ ಆಶೀರ್ವಾದ ಸದಾ ನಮ್ಮಗಳೆಲ್ಲರ ಮೇಲಿರಲಿ ಎಂದು ಪ್ರಾರ್ಥಿಸುತ್ತೇನೆ. ಜಿಲ್ಲೆಗಳಿಗೆ ರಾಜ್ಯ ಸಂಸ್ಥೆ ನೀಡುವ ಪ್ರಾತಿನಿಧ್ಯವನ್ನು ಸಂಪೂರ್ಣವಾಗಿ ಸದುಪಯೋಗಪಡಿಸಿಕೊಳ್ಳಿ, ಹೆಚ್ಚೆಚ್ಚು ಕ್ರಿಯಾಶೀಲರಾಗಿ ನಮ್ಮಗಳ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸೋಣ ಎಂದು ಆಶಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# ರಾಜ್ಯ ವಾರ್ತೆ.............

## ರಾಜ್ಯಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ಚಾರಣ ಮತ್ತು ಪರಿಸರ ಅಧ್ಯಯನ ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯು ಬೆಳಗಾವಿ ಜಿಲ್ಲಾ ಸಂಸ್ಥೆಯ ಸಹಕಾರದೊಂದಿಗೆ ರೋವರ್ಸ್ ಮತ್ತು ರೇಂಜರ್ಸ್‌ಗಳಿಗಾಗಿ ದಿನಾಂಕ 23 ರಿಂದ 27 ಮಾರ್ಚ್ 2013 ರವರೆಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನಲ್ಲಿ ರಾಜ್ಯಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ಚಾರಣ ಮತ್ತು ಪರಿಸರ ಅಧ್ಯಯನ ಶಿಬಿರ ಆಯೋಜಿಸಿತ್ತು. ರಾಜ್ಯದ ವಿವಿಧ ಜಿಲ್ಲೆಗಳಿಂದ 112 ರೋವರ್‌ಗಳು ಮತ್ತು 55 ರೇಂಜರ್‌ಗಳು ಭಾಗವಹಿಸಿದ್ದರು.

ದಿನಾಂಕ 23-03-2013 ರಂದು ವಿವಿಧ ಜಿಲ್ಲೆಗಳಿಂದ ಆಗಮಿಸಿದ ರೋವರ್ಸ್ ಮತ್ತು ರೇಂಜರ್ಸ್‌ಗಳ ನೊಂದಣಿ ಮಾಡಲಾಯಿತು. ಸಂಜೆ 5.30ಕ್ಕೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಶಿಬಿರವನ್ನು ಉದ್ಘಾಟಿಸಿದರು. ಗೌರವ ರಾಜ್ಯ ಸ್ಕೌಟ್ಸ್ ತರಬೇತಿ ಆಯುಕ್ತರಾದ ಶ್ರೀ ಚಿನ್ನಸ್ವಾಮಿರೆಡ್ಡಿ, ಧಾರವಾಡ ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಬೆಳಗಾಂ ವಿಭಾಗದ ಸಹಾಯಕ ರಾಜ್ಯ ಸ್ಕೌಟ್ ಆಯುಕ್ತರಾದ ಶ್ರೀ ಎಂ. ಎಂ. ಲೋಂಡೆ, ಗೋಕಾಕ್ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎ.ಎಸ್. ಜೋಡಗೇರಿ, ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿಗಳಾದ ಶ್ರೀ ವಿ.ಎಂ. ಸೂಲಿಗಾಂವಿ, ಬೆಳಗಾವಿ ಜಿಲ್ಲಾ ಸ್ಕೌಟ್ಸ್ ಆಯುಕ್ತರು ಮತ್ತು ಹುಕ್ಕೇರಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಗಜಾನನ ಮನ್ನಿಕೇರಿ, ಶಿಬಿರ ನಾಯಕರಾದ ಶ್ರೀ ವಿ.ಎ. ಸಾತಪುತೆ (ಆರ್.ಎಸ್.ಎಲ್.) ರೇಂಜರ್ ವಿಭಾಗದ ನಾಯಕಿ ಶ್ರೀಮತಿ ಸುಜಾತ ಲೊಂಡಿಕಟ್ಟಿ, ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಲಕ್ಷ್ಮೀ ಮಂಗಿ, ಶಿಬಿರ ಸಹಾಯಕರಾದ ಶ್ರೀ ಕೆ.ಎಸ್. ಪ್ರತೀಮ್‌ಕುಮಾರ್, ಡಾ. ನಾರಾಯಣಸ್ವಾಮಿ, ರೇಂಜರ್ ವಿಭಾಗದಿಂದ ಶ್ರೀಮತಿ ಎನ್. ಕೆ. ಛಾಯಾ, ಶ್ರೀಮತಿ ಭಾರತಿ ಡಯಾಸ್ ಮುಂತಾದವರು ಉಪಸ್ಥಿತರಿದ್ದರು.

ಗೋಕಾಕ್ ತಾಲ್ಲೂಕಿನ ಕಡಬಗಟ್ಟಿ, ಯೋಗಿಕೊಳ್ಳ, ಗೋಕಾಕ್ ಫಾಲ್ಸ್, ಮರಡಿ ಮಠ ಮತ್ತು ಮಡಗಾಂವ್‌ಗಳಿಗೆ 'ಚಾರಣ' ನಡೆಸಲಾಯತು.

ಗೋಕಾಕ್ ಫಾಲ್ಸ್ ಪ್ರೈಮರಿ ಶಾಲೆಯಲ್ಲಿ ಉಪಹಾರ ಸ್ವೀಕರಿಸಿ ಭಾರತದ ಅತ್ಯುತ್ತಮ ಟೆಕ್ಸ್‌ಟೈಲ್ಸ್ ಗಿರಣಿ, ಗೋಕಾಕ ಟೆಕ್ಸ್‌ಟೈಲ್ಸ್ ಲಿಮಿಟೆಡ್, ಗೋಕಾಕ ಫಾಲ್ಸ್ ಜವಳಿ ಗಿರಣಿಯನ್ನು ಎಲ್ಲರೂ ವೀಕ್ಷಿಸಿದರು, ಗೋಕಾಕ ಮಿಲ್‌ನ ಆಡಳಿತ ವರ್ಗದವರು ಚಹ ಮತ್ತು ಬಿಸ್ಕೆಟ್ ವ್ಯವಸ್ಥೆ ಮಾಡಿದ್ದರು. ಅಲ್ಲಿಂದ ಮರಡೀ ಮಠಕ್ಕೆ ಪ್ರಯಾಣ ಬೆಳಸಿ ರಾತ್ರಿ ಮರಡಿ ಮಠದಲ್ಲಿ ಊಟ ಸವಿದು ರಾತ್ರಿ ಶಿಬಿರಾಗ್ನಿ ಮಾಡಿ ಬೆಳಗ್ಗೆ ಉಪಹಾರ ಮುಗಿಸಿಕೊಂಡು ಮರಡಿಮಠ ದರ್ಶನ ಪಡೆದು ಗೋಕಾಕ ಫಾಲ್ಸ್ ನತ ಕ್ಯಾಂಬಲ್ ಗಾರ್ಡ್‌ನ್, ಅಣೆಕಟ್ಟು, ಜಲಪಾತ, ಮಹಾಲಿಂಗೇಶ್ವರ ದರ್ಶನ ಮಾಡಿಕೊಂಡು ಗೋಕಾಕ ಫಾಲ್ಸ್ ತೂಗು ಸೇತುವೆ, (ಹ್ಯಾಂಗಿಂಗ್ ಬ್ರಿಡ್ಜ್) ಮೂಲಕ ಧೂಪದಾಳಕ್ಕೆ ಪ್ರಯಾಣಿಸಲಾಯಿತು. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಉಪಹಾರವನ್ನು ಮುಗಿಸಿ ಸಾವಳಗಿ ನಂದಗಾಂವ ಗ್ರಾಮಕ್ಕೆ ಪ್ರಯಾಣ ಬೆಳೆಸಲಾಯಿತು. ಸಂಜೆ 7.30 ಗಂಟೆಗೆ ಗ್ರಾಮದ ಹಿರಿಯರು ಮತ್ತು ಶಾಲೆಯ ಸಿಬ್ಬಂದಿವರ್ಗದೊಂದಿಗೆ ಶಿಬಿರಾಗ್ನಿ ಉದ್ಘಾಟಿಸಿದರು. ನಂದಗಾಂವ ಶಾಲೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳ ಮುಖ್ಯೋಪಾಧ್ಯಾಯರು ಊಟ, ವಸತಿ ವ್ಯವಸ್ಥೆ

ಮಾಡಿದ್ದರು. ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು. ಶ್ರೀ ಸಾವಳಗಿ ಸಿದ್ದೇಶ್ವರ ಮಠವನ್ನು ವೀಕ್ಷಿಸಲಾಯಿತು.

ಸಂಜೆ ಮುಕ್ತಾಯ ಸಮಾರಂಭವನ್ನು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಏರ್ಪಡಿಸಲಾಗಿತ್ತು. ಶ್ರೀ ಗಜಾನನ ಮನ್ನಿಕೇರಿ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಬೆಳಗಾವಿ ಮತ್ತು ಶ್ರೀ ಎ.ಎಸ್. ಜೊಡಗೇರಿ ಕ್ಷೇತ್ರ ಶಿಕ್ಷಣಾಧಿಕಾರಿ, ಗೋಕಾಕ್, ಶ್ರೀ ವಿಜಯಕುಮಾರ್ ಸೂಲಿಗಾವಿ ಮತ್ತು ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು, ಎರಡು ಶಾಲೆಗಳ ಮುಖ್ಯೋಪಾಧ್ಯಾಯರುಗಳು ಹಾಗೂ ಶಿಕ್ಷಕರುಗಳು ಉಪಸ್ಥಿತರಿದ್ದರು.

ಸಮವಸ್ತ್ರ, ಪಟಾಲಂ ವ್ಯವಸ್ಥೆ, ಗೌರವ ನ್ಯಾಯ ಸಭೆ, ಧ್ವಜ ಸಮಾರಂಭಗಳು, ಶಿಬಿರಾಗ್ನಿ, ಸುಧಾರಿತ ಡೋಲಿಗಳು, ಗಂಟುಗಳು, ಹಗ್ಗ-ಹಗ್ಗವನ್ನು ಸರಿಯಾಗಿ ಇಟ್ಟುಕೊಳ್ಳುವ ಕ್ರಮಗಳು, ನಿಸರ್ಗ ಅಧ್ಯಯನ, ಅಗ್ರಗಾಮಿತ್ವ, ಮುಂಜಾನೆಯ ತಪಾಸಣೆ, ದಿಕ್ಸೂಚಿ, ಪ್ರಥಮ ಚಿಕಿತ್ಸೆ, ಕಾವಲು ಕಾಯುವಿಕೆ, ರೋವರ್ ಮತ್ತು ರೇಂಜರ್‌ಗಳ ಪ್ರಗತಿಪರ ಶಿಕ್ಷಣ, ಮುಂತಾದ ವಿಷಯಗಳ ಕುರಿತು ಮಾಹಿತಿ, ಮಾರ್ಗದರ್ಶನ ನೀಡಲಾಯಿತು.

ರಾಜ್ಯ ಸಂಘಟನಾ ಆಯುಕ್ತ (ಸ್ಕೌಟ್ಸ್) ಶ್ರೀ ಟಿ.ಎ. ಮಂಜುನಾಥಾಚಾರ್ ಮತ್ತು ರಾಜ್ಯ ಸಂಘಟನಾ ಆಯುಕ್ತೆ (ಗೈಡ್ಸ್) ಶ್ರೀಮತಿ ಜಾನಕಿ ವೇಣುಗೋಪಾಲ್‌ರವರ ಮಾರ್ಗದರ್ಶನದಲ್ಲಿ ಶ್ರೀ ನಾಗೇಶ ಶಿವಾಪೂರ ಎ.ಎಸ್.ಓ.ಸಿ. ಶ್ರೀ ಡಿ.ಬಿ. ಅತ್ತರ್ ಡಿ.ಓ., ಇವರುಗಳು ಎಲ್ಲಾ ಚಟುವಟಿಕೆ ಮತ್ತು ಶಿಬಿರದ ಸಂಘಟನೆಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು.

**ಈ ಕೆಳಕಂಡ ಶಾಲೆಗಳ ಮುಖ್ಯಸ್ಥರುಗಳು, ಸಂಸ್ಥೆಯವರು ಹಾಗೂ ಮುಖಂಡರು ಶಿಬಿರದ ಯಶಸ್ಸಿಗೆ ಸಹಕರಿಸಿದ್ದಾರೆ.**

* ಎನ್.ಎಸ್.ಎಫ್, ಶಾಲೆಯ ಆಡಳಿತ ಮಂಡಳಿ (ಜಾರಕೀಹೊಳಿ ಸಹೋದರರು) ಮತ್ತು ಮುಖ್ಯೋಪಾಧ್ಯಾಯರು. ಶಿಬಿರದಲ್ಲಿ ಭಾಗವಹಿಸಿದ ರೋವರ್ಸ್, ರೇಂಜರ್ಸ್‌ಗಳಿಗೆ ಉಚಿತ ವಸತಿ, ಊಟ, ತಿಂಡಿ ವ್ಯವಸ್ಥೆ ಮಾಡಿದ್ದರು.
* ಶ್ರೀ ಎಂಜಾಯ್ ಐಸ್‌ಕ್ರೀಮ್ ಮಾಲಿಕರಾದ ಶ್ರೀ ರತನ್ ರವರು ಶಿಬಿರಾರ್ಥಿಗಳಿಗೆ ಐಸ್ ಕ್ಯಾಂಡಿಯನ್ನು ಉಚಿತವಾಗಿ ವಿತರಿಸಿದರು.
* ಕೆ.ಎಲ್.ಇ. ಸಂಸ್ಥೆಯವರು ಶಿಬಿರಾರ್ಥಿಗಳಿಗೆ ಕ್ಯಾಪ್ ಮತ್ತು ನೆಕ್ ಸ್ಕಾರ್ಫ್‌ನ್ನು ನೀಡಿರುತ್ತಾರೆ.
* ಆಶ್ರಯ ಬಡಾವಣೆ ಶಾಲೆ, ಗೋಕಾಕ್ ಇವರು ಉಪಹಾರ ಮತ್ತು ಊಟದ ವ್ಯವಸ್ಥೆ ಏರ್ಪಡಿಸಿದ್ದರು.
* ಮುಖ್ಯೋಪಾಧ್ಯಾಯರು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಕಡಬಗಟ್ಟ ಇವರು ಮಧ್ಯಾನ್ಹದ ಊಟದ ವ್ಯವಸ್ಥೆ ಮಾಡಿದ್ದರು.
* ಯೋಗಿಕೊಳ್ಳದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ರೇಂಜರ್ಸ್‌ಗಳಿಗೆ ವಾಸ್ತವ್ಯ ಮತ್ತು ನಿರ್ವಾಣೇಶ್ವರ ಮಠದಲ್ಲಿ ರೋವರ್ಸ್‌ಗಳ ವಾಸ್ತವ್ಯದ ವ್ಯವಸ್ಥೆ ಮಾಡಲಾಗಿತ್ತು. ಫ್ರಾನ್ಸಿಸ್ ಪ್ರಾಸಿಯವರು ಮಮತಾಪುರದ ಶಿಕ್ಷಕರಾದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಯೋಗಿಕೊಳ್ಳ ಇವರು ರಾತ್ರಿ ಊಟ ಮತ್ತು ಬೆಳಗ್ಗೆ ಉಪಹಾರದ ವ್ಯವಸ್ಥೆ ಮಾಡಿದ್ದರು.
* ಜಾರಕಿಹೊಳೆ ಸಹೋದರರು ಉಚಿತವಾಗಿ ಶಿಬಿರಾರ್ಥಿಗಳಿಗೆ ಬ್ಯಾಗ್‌ಗಳನ್ನು ನೀಡಿದರು. ಶಿಬಿರಾರ್ಥಿಗಳಿಗೆ ಲಗೇಜ್‌ಗಳನ್ನು ಸಾಗಿಸಲು ಕೆ.ಎಲ್.ಇ. ಸಂಸ್ಥೆ ಮತ್ತು ಪಾಯಸಾಗರ ಸಂಸ್ಥೆಯು 2 ವಾಹನಗಳನ್ನು ನೀಡಿದ್ದರು

# State Level District Training Commissioners Meet

The State Level District Training Commissioners Meet was held for 2 days on 27th & 28th March 2013 at Dr. Annie Besant Scouts and Guides State Training and Camping Centre. Dodabballapur.

22 District Training Commissioners participated in the Meet. The DTC's of Kodagu, Bijapur, Bagalkote, Chitradurga, Gadag, Sirsi, Belgaum, Tumkur, Kolar, Chikkaballapur Districts were not present in the meet.

The following subjects were discussed -

* Role of the District Training Commissioners
* Functions of the District Training Commissioners
* Amendments of Boy Programme
* Amendments of Rules
* Amendments of Scheme of Training
* Renewal of Hon'ble Charge
* Relationship of District Training Commmissioners with their Districts
* Relationship of Trainers with N.T.C./ S.T.C./ D.T.C./Training Counsellor/Badge Examiners.
* Co-ordination of D.T. C. with A.S.O.C's / D.O.C's / D.O.'s
* Prime Minister Shield Competition
* Warrants & Charts.

Mr. T.S. Lucas, State Commissioner(s) Visited the Camp and discussed about the relationship of DTC's with the Office bearers of the District Association / State Association and asked them to update their knowledge & skills to communicate to properly their trainees,

Mr. N. Srinivasan, Headquarter Commissioner. (Publications) visited the campus & discussed about the Scheme of Training and latest Amendaments proposed by the National Headquarters.

Sri Kondajji B. Shanmukhappa, State Chief Commissioner visited the camp on 28 March and discussed following issues with the District Training Commissioners.

1)Urgent need to motivate the eligible and willing SCOUTERS of the District to acquire Higher Knowledge and Trining like HWB, Pre- ALT, ALT, and LT.

2) In view of recent amendements approved by National Headquarters the need and necessity to depute all eligible ALT's/ LT's for Re-orientation Course after observing required formalities.

3) To have regular contact with the District Association and Co-ordinate in Organising & Conducting the Basic Training Courses each year regularly .

4) To Guide- DA Office-bearers to appoint Training Counsellors as per the Scheme of Training.

5) If State Headquarters has not issued letters of oppintment as DTC(s) ask DA's to send letters and get appointment letters and Warrants from SHQ and GUIDEWING.

6) He Appealed to them to involve themselves actively involve the Programmes & Activities, Trainings and provide requred technical support.

The meet ended at 5 p.m. after lowering the flag, Sri C.S. Reddy Hon. STC(S.) was the Leader of the meet and made following suggestions.

* All the District Training Commissioners must posses Warrants
* They must involve in the functioning of the District in all respects.
* They must be consulted while Organising Training Courses in the District.
* Training Counsellors - Badge Examiners - Badge Instructors must be appointed
* D.T.C.'s meet must be held Twice a year.
* They should also have close relationship with S.T.C.'s and obtain clarifications if required on all Technical matters.

# ಜಿಲ್ಲಾ ವಾರ್ತೆಗಳು

## ವಿಜಾಪುರ

ದಿನಾಂಕ 16–03–2013 ರಂದು ಹೆಚ್.ಪಿ.ಎಸ್. ಕಲಗುರ್ಕಿ ತಾ॥ ಬಾಗೇವಾಡಿಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ದೀಕ್ಷಾ ಸಮಾರಂಭ ನಡೆಯಿತು. ಗ್ರಾಮ ಪಂಚಾಯತ್ ಅಧ್ಯಕ್ಷರು ಮಾತನಾಡಿ ಮಕ್ಕಳಲ್ಲಿ ಜೀವನ ರೂಪಿಸುವುದು ಮತ್ತು ಉತ್ತಮ ರೀತಿಯಲ್ಲಿ ಬದುಕುವ ಕಲೆ, ಇವುಗಳನ್ನು ಬೆಳೆಸಿಕೊಳ್ಳಿರಿ ಎಂದು ಶ್ರೀಮತಿ ಕುದರಿ ಹೇಳಿದರು.

ಕಾರ್ಯಕ್ರಮದಲ್ಲಿ ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಜಗದೀಶ ಬೋಳಸೂರ, ಮುಖ್ಯ ಗುರುಗಳಾದ ವ್ಹಿ.ಡಿ. ಪಿಹಳ್ಳಿ ಮಾತನಾಡಿ ಸ್ಕೌಟ್–ಗೈಡ್‌ಗಳು ರಾಷ್ಟ್ರದ ಭಾವಿ ಪ್ರಜೆಗಳು ಇಂದಿನಿಂದಲೇ ಒಳ್ಳೆಯ ಗುಣಗಳನ್ನು ಬೆಳೆಸಿಕೊಳ್ಳಬೇಕು ಎಂದರು. ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ಐ.ಸಿ. ಪತ್ತಾರ್ ಸ್ಕೌಟ್ಸ್–ಗೈಡ್ಸ್‌ಗಳಿಗೆ ಪ್ರಮಾಣವಚನ ಬೋಧಿಸಿದರು. ಸ್ಕೌಟ್ಸ್ ಮಾಸ್ಟರ್ ಆನಂದ ಬಡಿಗೇರ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಊರಿನ ಗಣ್ಯರು, ಎಸ್.ಡಿ.ಎಂ.ಸಿ., ಅಧ್ಯಕ್ಷರು ಹಾಗೂ ಸದಸ್ಯರು ಭಾಗವಹಿಸಿದ್ದರು.

***************

ದಿನಾಂಕ 16–03–2013 ರಂದು ಸರ್ಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಸ್ಕೌಟ್ಸ್ ತಂಡದ ಮಕ್ಕಳಿಗೆ ದೀಕ್ಷೆ ನೀಡುವ ಕಾರ್ಯಕ್ರಮ ನಡೆಸಲಾಯಿತು. ಈ ಕಾರ್ಯಕ್ರಮದಲ್ಲಿ ವಿಜಾಪುರ ತಾಲೂಕಾ ಕಾರ್ಯದರ್ಶಿ ಪಿ.ಎಸ್. ಕುಂಬಾರ ಮುಖ್ಯ ಅತಿಥಿಗಳಾಗಿ ಮಾತನಾಡುತ್ತ ಸ್ಕೌಟಿಂಗ್–ಗೈಡಿಂಗ್‌ನಲ್ಲಿ ದೀಕ್ಷಾ ಸಮಾರಂಭ ಒಂದು ಪವಿತ್ರ ಕಾರ್ಯಕ್ರಮವಾಗಿದ್ದು ಇದರಲ್ಲಿ ಪಾಲ್ಗೊಂಡ ಸ್ಕೌಟ್‌ಗಳು ಭಾಗ್ಯಶಾಲಿಗಳು ಎಂದರು. ಅಧ್ಯಕ್ಷತೆಯನ್ನು ಶಾಲಾ ಮುಖ್ಯಗುರುಗಳಾದ ಜಿ.ಟಿ. ಕಟ್ಟಿಮನಿ ಅವರು ವಹಿಸಿದ್ದರು. ಅಧ್ಯಕ್ಷೀಯ ನುಡಿಗಳಾಡಿದ ಅವರು ಶಾಲೆಯಲ್ಲಿ ನಿರಂತರವಾಗಿ ಸ್ಕೌಟ್ ತಂಡ ಮುನ್ನಡೆಸಿಕೊಂಡು ಹೋಗಲಾಗುವುದು ಮತ್ತು ಅದಕ್ಕೆ ಎಲ್ಲ ರೀತಿಯ ಅನುಕೂಲ ಕಲ್ಪಿಸಿಕೊಡಲಾಗುವುದು ಎಂದರು. ತಾಲೂಕ್ ಪಂಚಾಯತ ಅಧ್ಯಕ್ಷರಾದ ಶ್ರೀ ಆನಂದ ಹೊಟಗಾರವರು ಮತ್ತು ಶಾಲೆಯ ಹಿಂದಿನ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಕಮಲಾಕರ ಮಸಳಿ ಅವರು ಉಪಸ್ಥಿತರಿದ್ದು ಸ್ಕೌಟ್ ತಂಡದ ಮಕ್ಕಳಿಗೆ ಸಮವಸ್ತ್ರಗಳನ್ನು ನೀಡಿದರು. ಕೆ.ಜಿ.ಎಸ್. ತಡವಲಗಾ ಶಾಲೆಯ ಮುಖ್ಯಗುರುಗಳಾದ ಶ್ರೀ ಎಸ್.ಸಿ. ಗಿಡಗಂಟಿ ಅವರು ಮಾತನಾಡಿದರು.

ತಂಡದ ನಾಯಕಿ ಇಂದಿರಾ ಹರಗಿ ಮಕ್ಕಳಿಗೆ ಪ್ರಮಾಣ ವಚನ ನೀಡಿ ಕಾರ್ಯಕ್ರಮ ನಿರೂಪಿಸಿದರು. ವಾಣಿಶ್ರೀ ಪಾಟೀಲ ಶಾಲಾ ಸಿಬ್ಬಂದಿಯವರು ಹಾಜರಿದ್ದರು.

************

ವಿಜಾಪುರ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರದ ಅಭಿವೃದ್ಧಿಗೆ ರಾಜ್ಯ ಸಂಸ್ಥೆಯಿಂದ ಪ್ರಸಕ್ತ ವರ್ಷ 3 ಲಕ್ಷ ರೂ. ಅನುದಾನವನ್ನು ಶೀಘ್ರದಲ್ಲೇ ಮಂಜೂರು ಮಾಡಲಾಗುವುದು ಎಂದು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಭರವಸೆ ನೀಡಿದರು.

ಇಲ್ಲಿನ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ಜರುಗಿದ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳ ಹಾಗೂ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ ಸಭೆಯಲ್ಲಿ ಮಾತನಾಡಿದ ಅವರು ಹಿಂದಿಗಿಂತಲೂ ಈಗ ಜಿಲ್ಲಾ ಸಂಸ್ಥೆ ಅತ್ಯುತ್ತಮ ಚಟುವಟಿಕೆ ಹಮ್ಮಿಕೊಳ್ಳುತ್ತಿದ್ದು ಉತ್ತಮ ಬೆಳವಣಿಗೆ ಕಾಣುತ್ತಿದೆ. ಬುರಾಣಪುರದಲ್ಲಿ 15 ಎಕರೆ ಪ್ರದೇಶದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಶಿಬಿರಗಳು ಮತ್ತು ಚಟುವಟಿಕೆಗಳನ್ನು ನಡೆಸಲು ಅನುಕೂಲವಾಗಲೆಂದು ತರಬೇತಿ ಕೇಂದ್ರವನ್ನು ಅಭಿವೃದ್ಧಿ ಪಡಿಸಲಾಗಿದೆ ಎಂದು ತಿಳಿಸಿದರು.

ಮುಖ್ಯ ಅತಿಥಿಯಾಗಿದ್ದ ರಾಜ್ಯ ತರಬೇತಿ ಆಯುಕ್ತ ಶ್ರೀ ಚೆನ್ನಸ್ವಾಮಿ ರೆಡ್ಡಿ ಮಾತನಾಡಿ, ರಾಜ್ಯ ಸಂಸ್ಥೆಯಿಂದ ಹಲವಾರು ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದು, ಪ್ರತಿ ತರಬೇತಿಗೆ ಜಿಲ್ಲೆಯಿಂದ ಸ್ಕೌಟರು, ಗೈಡರುಗಳು ಉತ್ಸುಕರಾಗಿ ಭಾಗವಹಿಸುತ್ತಿರುವುದು ಉತ್ತಮ ಬೆಳವಣಿಗೆ ಎಂದರು.

ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಕೋಶಾಧಿಕಾರಿ ಶ್ರೀ ಸಹಜಾನಂದ ದಂಧರಗಿ ಮಾತನಾಡಿ, ತರಬೇತಿ ಕೇಂದ್ರದ ಅಭಿವೃದ್ಧಿಗೆ ರಾಜ್ಯ ಸಂಸ್ಥೆಯಿಂದ 3 ಲಕ್ಷ ರೂ. ಅನುದಾನ ನೀಡುತ್ತಿರುವುದು ಅತ್ಯಂತ ಸಂತಸದ ಸಂಗತಿ, ಮುಂದಿನ ದಿನಗಳಲ್ಲಿ ಇನ್ನೂ ಹೆಚ್ಚಿನ ಅನುದಾನ ಬಿಡುಗಡೆ ಮಾಡಬೇಕೆಂದು ಕೋರಿದರು.

ಶ್ರೀ ಸಿದ್ಧಣ್ಣ ಸಕ್ರಿ ಮಾತನಾಡಿದರು. ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಯುತರುಗಳಾದ ಬಿ.ಐ., ಬಿರಾದಾರ ಪಾಟೀಲ, ಪೂಜಪ್ಪ ಪೂಜಾರಿ, ಬಸನಗೌಡ ಹರನಾಳ ಸೌಮ್ಯ ಜೋಷಪ್, ಸಹಕಾರ್ಯದರ್ಶಿ ಶರಣು ಸಬರದ, ಎ.ಬಿ. ಹುಣಶ್ಯಾಳ, ಕೆ.ಬಿ. ಹೊಟಗೊಂಡ, ಸಾರ್ವಜನಿಕ ಶಿಕ್ಷಣ ಇಲಾಖೆ ಅಧಿಕಾರಿಗಳಾದ ಶ್ರೀ ನಾಗೇಶ ಸಿನ್ನೂರ, ಅವಟಿ, ಸಂಸ್ಥೆಯ ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್. ಎಸ್. ಬೊಮ್ಮನಹಳ್ಳಿ, ಶ್ರೀ ಎಸ್.ಸಿ. ಝುರೆ, ಶ್ರೀಮತಿ ಪಿ.ಎಂ. ಪೂಜಾರಿ ಮೊದಲಾದವರು ಉಪಸ್ಥಿತರಿದ್ದರು. ಶ್ರೀಮತಿ ಎಸ್.ಎನ್. ಶಿಂಧೆ ಸ್ವಾಗತಿಸಿದರು. ಡಿ.ಓ.ಸಿ. ಶ್ರೀ ಜಗದೀಶ ಬೋಳಸೂರ ಕಾರ್ಯಕ್ರಮ ನಿರೂಪಿಸಿದರು.

## ರಾಯಚೂರು

ದಿನಾಂಕ: 03-04-2013 ರಂದು ರಾಯಚೂರು ಜಿಲ್ಲೆಗೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಬೇಟಿ ನೀಡಿ ಜಿಲ್ಲಾ ಸಂಸ್ಥೆಯ ಕಾರ್ಯಾಲಯದ ಪದಾಧಿಕಾರಿಗಳೊಂದಿಗೆ ಹಾಗೂ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳೊಂದಿಗೆ ಸಭೆ ನಡೆಸಿ ಜಿಲ್ಲಾ ಸಂಸ್ಥೆಯ ಅಭಿವೃದ್ಧಿ ಕಾರ್ಯಗಳ ಬಗ್ಗೆ ಹಾಗೂ ಚಟುವಟಿಕೆಗಳ ಬಗ್ಗೆ ಪರಿಶೀಲನೆ ಮಾಡಿದರು. ನಂತರ ಅವರು 2011-12ನೇ ಸಾಲಿನಲ್ಲಿ ಸಂಗ್ರಹಿಸಿದ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್‌ಗಳಿಂದ ಬಂದ ಅನುದಾನದಲ್ಲಿ, ಜಿಲ್ಲಾ ಸಂಸ್ಥೆಯು ಖರೀದಿಸಿದ ಕಂಪ್ಯೂಟರ್ ಹಾಗೂ ಧ್ವನಿವರ್ಧಕಗಳ ಉದ್ಘಾಟನೆಯನ್ನು ನೆರವೇರಿಸಿದರು.

ರಾಜ್ಯ ಮುಖ್ಯ ಆಯುಕ್ತರೊಂದಿಗೆ ಶ್ರೀ ಸಿ.ಎಸ್. ರೆಡ್ಡಿ, ಗೌರವ ರಾಜ್ಯ ತರಬೇತಿ ಆಯುಕ್ತರು (ಸ್ಕೌ). ಎಸ್.ಟಿ.ಸಿ.(ಸ್ಕೌ) ಶ್ರಿ ಟಿ.ಎ. ಮಂಜುನಾಥಾಚಾರ್ ಎಸ್.ಓ.ಸಿ.(ಸ್ಕೌ) ಶ್ರೀಮತಿ ಜಾನಕಿ ವೇಣುಗೋಪಾಲ್ ಎಸ್.ಓ.ಸಿ. (ಗೈ) ಆಗಮಿಸಿ ಜಿಲ್ಲಾ ಸಂಸ್ಥೆಯ ಪ್ರಗತಿಯ ಬಗ್ಗೆ ಪರಿಶೀಲಿಸಿದರು. ನಂತರ ಜಿಲ್ಲಾ ಸಂಸ್ಥೆಯ ವತಿಯಿಂದ ಎಲ್ಲರನ್ನೂ ಸನ್ಮಾನಿಸಿ ಗೌರವಿಸಲಾಯಿತು. ಅಧ್ಯಕ್ಷತೆಯನ್ನು ಮಾನ್ಯ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಮತ್ತು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಉಪಸ್ಥಿತರಿದ್ದರು.

*******************

ದಿನಾಂಕ 13–03–2013 ರಂದು ಮಾನವಿ ತಾಲ್ಲೂಕಿನ ಸರಕಾರಿ ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲೆ, ಹಿಡಕಲ್‌ನಲ್ಲಿ ಕಬ್ ಫ್ಲಾಕ್ ಮತ್ತು ಬುಲ್ ಬುಲ್ ಘಟಕಗಳನ್ನು ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು(ಗೈಡ್ಸ್) ಇವರು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಈ ಕಾರ್ಯಕ್ರಮದಲ್ಲಿ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಗುಂಡಪ್ಪ ಊರಿನ ಮುಖಂಡರಾದ ಶ್ರೀಶೈಲಗೌಡ ಪಾಟೀಲ, ಹನುಮಂತಪ್ಪ ಸಿ.ಆರ್.ಪಿ. ಮುಖ್ಯ ಗುರುಗಳಾದ ಸಜ್ಜಿದ್ ಆಲಿ, ಕಬ್ ಮಾಸ್ಟರ್ ಸುಬ್ರಮಣ್ಯಂ, ಸಿ. ಶ್ರೀ ರಾವುತ್ ರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಉಪಸ್ಥಿತರಿದ್ದರು.

**********

ದಿನಾಂಕ 15–03–2013 ರಂದು ಶ್ರೀ ಬಸವೇಶ್ವರ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ, ದೇವದುರ್ಗದಲ್ಲಿ ಬಸವೇಶ್ವರ ಸ್ಕೌಟ್ಸ್ ಘಟಕವನ್ನು ಉದ್ಘಾಟಿಸಲಾಯಿತು. ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ಘಟಕವನ್ನು ಉದ್ಘಾಟಿಸಿರು. ಮುಖ್ಯ ಅತಿಥಿಗಳಾಗಿ ಶ್ರೀ ಶ್ರೀಧರ್ ಎನ್. ಕ್ಷೇತ್ರ ಶಿಕ್ಷಣಾಧಿಕಾರಿಗಳು ದೇವದುರ್ಗ ಇವರು ಆಗಮಿಸಿದ್ದರು. ಈ ಸಂದರ್ಭದಲ್ಲಿ ಶ್ರೀಮತಿ ಅಜೀಜಾ ಸುಲ್ತಾನ, ಜಿಲ್ಲಾ ಆಯುಕ್ತರು (ಗೈ) ಶ್ರೀರಾವುತ್ ರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು (ಸ್ಕೌ) ಶ್ರೀ ಬಿ.ಎಸ್. ಕೇಶಾಪೂರ ಆರ್. ದೇವದುರ್ಗ ಶ್ರೀ ದಂಡಪ್ಪ ಆಡಳಿತಾಧಿಕಾರಿಗಳು ಶ್ರೀ ಬಸವರಾಜ ಮಡಿವಾಳ ಮುಖ್ಯ ಗುರುಗಳು ಶ್ರೀ ದಾವಾಸಾಬ್ ಬಂಡಿ ಸ್ಕೌಟ್ ಮಾಸ್ಟರ್ ಉಪಸ್ಥಿತರಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀಮತಿ ಲತಾದೇವರು, ಸಂಸ್ಥೆಯ ಅಧ್ಯಕ್ಷರು ವಹಿಸಿಕೊಂಡಿದ್ದರು.

*************

ದಿನಾಂಕ 16–03–2013 ರಂದು ಸಿಂಧನೂರು ತಾಲ್ಲೂಕಿನ ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಹಾಗೂ ಸ.ಹಿ.ಪ್ರಾಥಮಿಕ ಶಾಲೆ ಅಂಬೇಡ್ಕರ್ ನಗರ, ಸಾಲಗುಂದ ಇಲ್ಲಿ ಕಬ್ ಪ್ಯಾಕ್ ಮತ್ತು ಬುಲ್‌ಬುಲ್ ಫ್ಲಾಕ್‌ನ್ನು ಉದ್ಘಾಟಿಸಲಾಯಿತು. ಕಬ್ ಮಾಸ್ಟರ್‌ಗಳಾದ ಕೆ.ವೆ. ವೇಣು ಮತ್ತು ಸುರೇಶ ಇವರುಗಳ ನೇತೃತ್ವದಲ್ಲಿ ಘಟಕಗಳನ್ನು ಪ್ರಾರಂಭಿಸಿ ಘಟಕಗಳ ಉದ್ಘಾಟನೆಯನ್ನು ಶ್ರೀ ರಾವುತ್ ರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು(ಸ್ಕೌ) ಇವರು ಫಲಕವನ್ನು ಅನಾವರಣ ಮಾಡುವುದರ ಮೂಲಕ ನೆರವೇರಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಾಲೆಯ ಮುಖ್ಯಗುರುಗಳಾದ ಶ್ರೀ ಹುಲುಗಪ್ಪ ವಹಿಸಿಕೊಂಡಿದ್ದರು. ಮುಖ್ಯ ಅತಿಥಿಗಳಾಗಿ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಮಲ್ಲಿಕಾರ್ಜುನ ಶ್ರೀ ರಾಂಕುಮಾರಅಂತರವಳ್ಳಿ ಕಾರ್ಯದರ್ಶಿಗಳು ಸ್ಥಳೀಯ ಸಂಸ್ಥೆ, ಸಿಂಧನೂರು, ಶ್ರೀಮತಿ ಸೀಮಾ ಜೆ. ಸಹಕಾರ್ಯದರ್ಶಿಗಳು ಸಿಂಧನೂರು ಶಾಲೆಯ ಎಸ್.ಡಿ.ಎಂ.ಸಿ., ಸದಸ್ಯರು ತಾಲೂಕಿನ ಕೋಶಾಧ್ಯಕ್ಷರು, ಸ್ಕೌಟ್–ಗೈಡ್‌ಗಳು ಭಾಗವಹಿಸಿದ್ದರು.

**********

ದಿನಾಂಕ 16-03-2013 ರಿಂದ 22-03-2013 ರ ವರೆಗೆ ರಾಜ್ಯ ಮಟ್ಟದ ಕಬ್ ಮಾಸ್ಟರ್ ಮೂಲ ತರಬೇತಿ ಮತ್ತು ಮುಂದುವರೆದ ತರಬೇತಿ ಶಿಬಿರವನ್ನು ಶ್ರೀ ಸುಗೂರೇಶ್ವರ ದೇವಸ್ಥಾನ, ದೇವಸಗೂರು ತಾ॥ ಜಿ॥ ರಾಯಚೂರು ಇಲ್ಲಿ ಹಮ್ಮಿಕೊಳ್ಳಲಾಗಿತ್ತು.

ಕಬ್ ಮಾಸ್ಟರ್ ಮೂಲ ತರಬೇತಿ ಶಿಬಿರದ ನಾಯಕರಾಗಿ ಶ್ರೀ ಜಗದೀಶ್ ಎಸ್. ಎ.ಎಲ್.ಟಿ.(ಸಿ) ಮೈಸೂರು ಹಾಗು ಕಬ್ ಮಾಸ್ಟರ್ ಮುಂದುವರೆದ ತರಬೇತಿಗೆ ಶ್ರೀಮತಿ ಜುಲಿಯಾನಾ ಲಸ್ರಾಡೋ ಎಲ್.ಟಿ.,(ಕ) ಮಂಗಳೂರು ಇವರು ನಾಯಕರಾಗಿ ಕಾರ್ಯನಿರ್ವಹಿಸಿದ್ದರು. ಮೂಲತರಬೇತಿ ಶಿಬಿರಕ್ಕೆ 11 ಜನ ಅಭ್ಯರ್ಥಿಗಳು ಹಾಜರಿದ್ದರು. ಶ್ರೀ ಸಿ.ಎಸ್. ರೆಡ್ಡಿ ಗೌರವ ರಾಜ್ಯ ತರಬೇತಿ ಆಯುಕ್ತರು (ಸ್ಕೌ) ಆಗಮಿಸಿ ದಿನಾಂಕ 19-01-2013 ರಂದು ಕೆಲವು ವಿಷಯಗಳ ಬಗ್ಗೆ ಮಾಹಿತಿ ನೀಡಿದರು.

## ಬಾಗಲಕೋಟೆ

ದಿನಾಂಕ: 15-03-2013 ರಂದು ಶ್ರೀ ಬಸವೇಶ್ವರ ಕಲಾ ಮಹಾವಿದ್ಯಾಲಯ ಬಾಗಲಕೋಟೆ ಇಲ್ಲಿನ ರೋವರ್ಸ್ ತಂಡ ಪ್ರಮಾಣವಚನ ಸಮಾರಂಭವನ್ನು ನೆರವೇರಿಸಿಲಾಯಿತು. ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಜಿಲ್ಲಾ ಆಯುಕ್ತ ಸ್ಕೌಟ್ಸ್ ಶ್ರೀ ಜಿ.ಬಿ. ಇದ್ದಲಗಿ ಜಿಲ್ಲಾ ಕಾರ್ಯದರ್ಶಿ ಶ್ರೀ ಚಂದ್ರಶೇಖರ್ ಅ. ಸಾವಳಗಿ ಶ್ರೀ ಶರೀಫ್ ಹೆಚ್. ಹತ್ತಿಮತ್ತೂರ, ಶ್ರೀ ನಾರಾಯಣ ಯಳ್ಳಿಗುತ್ತಿ ಹಾಗೂ ಇತರರು ಉಪಸ್ಥಿತರಿದ್ದರು. ಕಾಲೇಜಿನ ಪ್ರಾಚಾರ್ಯರಾದ ಶ್ರೀ ವಿ.ಕೆ. ಮೊರಬದ ರವರು ಮುಖ್ಯ ಅತಿಥಿಸ್ಥಾನವಹಿಸಿ "ದೀಕ್ಷಾ" ಸಮಾರಂಭ ಕುರಿತು ಮಾತನಾಡಿದರು. ಶ್ರೀ ಜಿ.ಜಿ. ಇದ್ದಲಗಿ ರವರು ಸ್ಕೌಟ್ಸ್ ಗೈಡ್ಸ್ ಕುರಿತು ಸಂಕ್ಷಿಪ್ತವಾಗಿ ಮಾತನಾಡಿದರು. ಸಂಘಟಕರು ಮಾಹಿತಿಯನ್ನು ನೀಡಿದರು. ಕಾಲೇಜಿನ ರೋವರ್ ತಂಡದ ನಾಯಕರಾದ ಶ್ರೀ ಎಂ. ಆರ್. ಇಂಗಳಿ ರವರು ದೀಕ್ಷೆ ನೀಡಿದರು.

************

ದಿನಾಂಕ 21-03-2013 ರಿಂದ 22-03-2013 ರ ವರೆಗೆ ರುದ್ರಗೌಡ ಪಾಟೀಲ ಸರಕಾರಿ ಪ್ರಥಮ ದರ್ಜೆಯ ಕಾಲೇಜು, ಬೋಳಗಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಬಾಗಲಕೋಟೆ ಇವರ ಸಂಯುಕ್ತ ಆಶ್ರಯದಲ್ಲಿ ಕಾಲೇಜಿನ ರೋವರ್ಸ್‌ಗಳಿಗೆ ಎರಡು ದಿನಗಳ ಕಾಲ ಶ್ರೀ ಕಲ್‌ಮಠದಲ್ಲಿ ವಿಶೇಷ ತರಬೇತಿ ಶಿಬಿರವನ್ನು ಏರ್ಪಡಿಸಲಾಗಿತ್ತು. ಕಾಲೇಜಿನ ಪ್ರಾಚಾರ್ಯರಾದ ಶ್ರೀ ಎಸ್.ಹೆಚ್. ತೆಕ್ಕೆನ್ನವರ ಶಿಬಿರವನ್ನು ಉದ್ಘಾಟಿಸಿದರು. ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು. ಶಿಬಿರಕ್ಕೆ ನಾಯಕರಾಗಿ ಶ್ರೀ ಎಸ್.ಎಸ್. ನಾರಾ, ಶ್ರೀ ಎಸ್.ಆರ್. ಪಾಟೀಲ ರವರು ಕಾರ್ಯ ನಿರ್ವಹಿಸಿದರು. ಶಿಬಿರದಲ್ಲಿ ಪ್ರಥಮ ಚಿಕಿತ್ಸೆ, ಗಂಟುಗಳು, ಹೊರಸಂಚಾರ ಇತ್ಯಾದಿಗಳ ಕುರಿತು ಮಾಹಿತಿ ನೀಡಲಾಯಿತು. ರೋವರ್ ತಂಡದ ನಾಯಕರಾದ ಶ್ರೀ ಟಿ.ಎ. ಮುಂಡೆವಾಡಿ ಉಪಸ್ಥಿತರಿದ್ದರು.

*************

ದಿನಾಂಕ 24-03-2013 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪರವರು ಹಾಗೂ ಗೌರವ ರಾಜ್ಯ ತರಬೇತಿ ಆಯುಕ್ತರು (ಸ್ಕೌ) ಶ್ರೀ ಚೆನ್ನಸ್ವಾಮಿ ರೆಡ್ಡಿ, ಬಾಗಲಕೋಟ ಜಿಲ್ಲಾ ಸಂಸ್ಥೆಗೆ ಬೇಟಿ ನೀಡಿದರು. ಈ ಸಭೆಯಲ್ಲಿ ಜಿಲ್ಲಾ ಪ್ರತಿನಿಧಿಗಳು ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು. ಶ್ರೀಮತಿ ಪಿ.ಜಿ. ಬಂದಿಕೇರಿ ಎಲ್ಲರನ್ನು ಸ್ವಾಗತಿಸಿದರು. ಜಿಲ್ಲಾ ಕಾರ್ಯದರ್ಶಿಗಳು, ಜಿಲ್ಲಾ ಸಂಘಟಕ ಶ್ರೀ ಶರೀಫ್ ಹತ್ತಿಮತ್ತೂರ ರವರು ಜಿಲ್ಲೆಯಲ್ಲಿ ಜರುಗಿದ ಚಟುವಟಿಕೆಗಳ ಕುರಿತು ವರದಿಯನ್ನು ಓದಿದರು.

## ಚಿತ್ರದುರ್ಗ

ದಿನಾಂಕ 23-03-2013 ರಂದು ರಾಜ್ಯ ಮುಖ್ಯ ಆಯುಕ್ತರು ಜಿಲ್ಲೆಯ ಅಭಿವೃದ್ಧಿ ವೀಕ್ಷಣೆಗಾಗಿ ಗೌರವ ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್) ಇವರೊಂದಿಗೆ ಆಗಮಿಸಿದ್ದರು. ಜಿಲ್ಲೆಯ ಪ್ರಗತಿ ಬಗ್ಗೆ ಪದಾಧಿಕಾರಿಗಳೊಂದಿಗೆ ವಿಚಾರ ವಿನಿಮಯ ಮಾಡಿದರು. ಸಂತೋಷ ವ್ಯಕ್ತಪಡಿಸಿದರು. ಈ ಸಂದರ್ಭದಲ್ಲಿ ಜಿಲ್ಲೆಯ ಕಛೇರಿಯಲ್ಲಿ "ಕಂಪ್ಯೂಟರ್ ವಿಭಾಗ" ವನ್ನು "ಸ್ಕೌಟಿಂಗ್ ಮತ್ತು ಗೈಡಿಂಗ್ ಚಿರಾಯುವಾಗಲಿ" ಎಂಬ ಸಂದೇಶವನ್ನು ಕಂಪ್ಯೂಟರ್ ಸ್ಕ್ರೀನ್ ಮೇಲೆ ಮೂಡಿಸುವ ಮೂಲಕ ಶ್ರೀ ಕೊಂಡಜ್ಜಿ. ಬ. ಷಣ್ಮುಖಪ್ಪ ಉದ್ಘಾಟಿಸಿದರು. ಜಿಲ್ಲೆಯ ಎಲ್ಲಾ ಪದಾಧಿಕಾರಿಗಳೂ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

************

ದಿನಾಂಕ 26-02-2013 ರಂದು ಶ್ರೀ ವಾಸವಿ ವಿದ್ಯಾ ಸಂಸ್ಥೆ ಚಿತ್ರದುರ್ಗ ಇಲ್ಲಿ ಜಿಲ್ಲಾಮಟ್ಟದ ಕಬ್ಸ್/ ಬುಲ್‌ಬುಲ್ಸ್ ಸ್ಕೌಟ್ಸ್-ಗೈಡ್ಸ್‌ಗಳ ಮೇಳ ಹಾಗೂ ಲಾರ್ಡ್ ಬೇಡನ್ ಪಾವೆಲ್‌ರವರ 156ನೇ ಹುಟ್ಟುಹಬ್ಬ ಹಾಗೂ ಚಿಂತನಾ ದಿನಾಚರಣೆಯನ್ನು ಆಚರಿಸಲಾಯಿತು.

ಧ್ವಜಾರೋಹಣದೊಂದಿಗೆ ಕಾರ್ಯಕ್ರಮ ಪ್ರಾರಂಭಿಸಿ ಬೇಡನ್ ಪೋವೆಲ್ ದಂಪತಿಗಳ ಭಾವ ಚಿತ್ರದೊಂದಿಗೆ ಬ್ಯಾಂಡ್ ವೃಂದದೊಂದಿಗೆ ನಗರದ ಪ್ರಮುಖ ಬೀದಿಗಳಲ್ಲಿ 300 ಸ್ಕೌಟ್-ಗೈಡ್‌ಗಳು ಪಥಚಲನೆ ನಡೆಸಿಕೊಟ್ಟರು. ಈ ಕಾರ್ಯಕ್ರಮವನ್ನು ಶ್ರೀಮತಿ ಹೇಮಂತಿನಿ ಪ್ರಕಾಶ್, ಜಿಲ್ಲಾ ಗೈಡ್ ಆಯುಕ್ತರು ಉದ್ಘಾಟಿಸಿ ಶುಭ ಹಾರೈಸಿದರು. ನಂತರ ಕರಕುಶಲ ವಸ್ತುಗಳ ತಯಾರಿಕೆ, ಮೆಹೆಂದಿ, ರಂಗೋಲಿ, ತರಕಾರಿಗಳಲ್ಲಿ ಆಕೃತಿಯ ರಚನೆ, ಚಿತ್ರಕಲಾ ಸ್ಪರ್ಧೆ ಏರ್ಪಡಿಸಲಾಗಿದ್ದಿತು. ಭೋಜನದ ನಂತರ ರಸಪ್ರಶ್ನೆ ಕಾರ್ಯಕ್ರಮದಲ್ಲಿ ಕೌಶಲ್ಯಗಳ ಬಗ್ಗೆ ಆಟಗಳ ಮೂಲಕ ತರಬೇತಿಯನ್ನು ನೀಡಲಾಯಿತು. ಮುಕ್ತಾಯ ಸಮಾರಂಭದಲ್ಲಿ ಶ್ರೀ ಪಿ.ಎಲ್. ಸುರೇಶ್ ರಾಜು, ಜಿಲ್ಲಾ ಸ್ಕೌಟ್ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಹೇಮಂತಿನಿ ಪ್ರಕಾಶ್, ಜಿಲ್ಲಾ ಆಯುಕ್ತರು (ಗೈಡ್) ಶ್ರೀ ಎ.ಬಿ. ವಾರದ - ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಬಿ. ಚಂದ್ರಶೇಖರ್, ಶ್ರೀ ಸಿ.ಎನ್. ಮಹೇಶ್ ಎ.ಎಲ್.ಟಿ.,(ಎಸ್) ಶ್ರೀಮತಿ ಶಶಿಕಲಾ, ಮುಖ್ಯ ಶಿಕ್ಷಕಿ ಶ್ರೀ ವಾಸವಿ ವಿದ್ಯಾ ಸಂಸ್ಥೆ, ಚಿತ್ರದುರ್ಗ, ಶ್ರೀಮತಿ ಅಂಬಿಕಾ ಹರೀಶ್ ಎ.ಡಿ.ಸಿ.(ಗೈಡ್) ಶ್ರೀಮತಿ ರೀನಾ ವೀರಭದ್ರಪ್ಪ ಡಿ.ಹೆಚ್.ಕ್ಯೂ.ಸಿ. (ಗೈ) ಶ್ರೀ ವಿ. ಧನಪಾಲ - ಡಿ.ಹೆಚ್.ಕ್ಯೂ.ಸಿ. (ಎಸ್.) ಶ್ರೀ ಟಿ.ಕೆ ಶಿವಕುಮಾರಸ್ವಾಮಿ ಜಿಲ್ಲಾ ಖಜಾಂಚಿ ಶ್ರೀಮತಿ ಹಸೀನ ಇವರು ಉಪಸ್ಥಿತರಿದ್ದರು.

*************

ದಿನಾಂಕ : 28-02-2013 ರಂದು ಬೇಡನ್ ಪೋವೆಲ್ ಹುಟ್ಟು ಹಬ್ಬವನ್ನು ರೋಟರಿ ಭವನ ಹಿರಿಯೂರು ಇಲ್ಲಿ ಸ್ಥಳೀಯ ಸಂಸ್ಥೆಯ ವತಿಯಿಂದ ಆಚರಿಸಲಾಯಿತು. ನಗರದ ಪ್ರಮುಖ ಬೀದಿಗಳಲ್ಲಿ ಪಥಚಲನ ಕಾರ್ಯಕ್ರಮ ನಡೆಸಲಾಯಿತು. ವಿವಿಧ ಸ್ಪರ್ಧೆಗಳನ್ನು ಏರ್ಪಡಿಸಿ ಬೇಡನ್ ಪೋವೆಲ್‌ರ ಬಗ್ಗೆ ಭಾಷಣ ಸ್ಪರ್ಧೆ ಏರ್ಪಡಿಸಲಾಗಿತ್ತು. ಮುಕ್ತಾಯ ಸಮಾರಂಭದಲ್ಲಿ ಶ್ರೀ ಸುಂದರ್ ರಾಜ್ ಅಧ್ಯಕ್ಷರು ಸ್ಥಳೀಯ ಸಂಸ್ಥೆ, ಹಿರಿಯೂರು ಇವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ತಿಪ್ಪೇಸ್ವಾಮಿ ತಾಲ್ಲೂಕು ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಹಾಗೂ ಜಿಲ್ಲಾವಾರು ಸ್ಕೌಟ್ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

*************

ದಿನಾಂಕ 5-03-2013 ರಂದು ಶ್ರೀ ಸ್ವಾಮಿ ವಿವೇಕಾನಂದ ಪ್ರೌಢಶಾಲೆ ಚಳ್ಳಕೆರೆ ಆವರಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ ನೆರವೇರಿತು. ಸದರಿ ರ್‍ಯಾಲಿಯಲ್ಲಿ ಪಥಚಲನೆ, ಕರಕುಶಲ ವಸ್ತುಗಳ ತಯಾರಿ, ತರಕಾರಿಗಳ ಆಕೃತಿ, ರಂಗೋಲಿ, ಮೆಹಂದಿ, ಚಿತ್ರಕಲೆ ವಸ್ತುಗಳ ತಯಾರಿ ಮುಂತಾದ ಚಟುವಟಿಕೆಗಳನ್ನು ನಡೆಸಲಾಯಿತು.

ಮುಕ್ತಾಯ ಸಮಾರಂಭದಲ್ಲಿ ಶ್ರೀ ತಿಪ್ಪಣ್ಣ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಪ್ರೋತ್ಸಾಹದ ನುಡಿಗಳನ್ನು ಹೇಳಿದರು. ಶ್ರೀ ರಾಜಶೇಖರ್ ಉದ್ಯಮಿಗಳು ಕಂಠವಸ್ತ್ರನೀಡಿರು, ಶ್ರೀ ಎಂ. ನಾರಾಯಣಪ್ಪ ಮಾಜಿ ಸ್ಕೌಟ್ ಆಯುಕ್ತರು ಎಲ್ಲರಿಗೂ ಊಟದ ವ್ಯವಸ್ಥೆ ಮಾಡಿದ್ದರು. ಶ್ರೀ ಷಣ್ಮುಖಪ್ಪ, ತಾಲ್ಲೂಕು ಶಿಕ್ಷಣಾಧಿಕಾರಿಗಳು ಸಂಪೂರ್ಣ ಜವಾಬ್ದಾರಿ ಹೊತ್ತು ಉತ್ತಮ ಸಹಾಯ ನೀಡಿದರು. ಶ್ರೀ ರಾಮಚಂದ್ರಪ್ಪ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಯ ಪಧಾದಿಕಾರಿಗಳು ಉಪಸ್ಥಿತರಿದ್ದರು.

*****************

ದಿನಾಂಕ 14-03-2013 ರಂದು ಗುರುಭವನ, ಮೊಳಕಾಲ್ಮೂರು - ಇಲ್ಲಿ 400 ಸ್ಕೌಟ್ಸ್ ಮತ್ತು ಗೈಡ್ಸ್ ಕಬ್ಸ್ ಮತ್ತು ಬುಲ್ ಬುಲ್ಸ್‌ಗಳಿಗಾಗಿ ತಾಲ್ಲೂಕು ಮಟ್ಟದ ರ್‍ಯಾಲಿ ಹಾಗೂ ಬೇಡನ್ ಪೊವೆಲ್ಲರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ಸರ್ಕಾರಿ ಬಾಲಕರ ಮೈದಾನದಲ್ಲಿ ಶ್ರೀ ಹನುಮಂತಪ್ಪ ತಾಲ್ಲೂಕು ದೈಹಿಕ ಶಿಕ್ಷಣಾಧಿಕಾರಿಗಳ ನೇತೃತ್ವದಲ್ಲಿ ಧ್ವಜಾರೋಹಣದೊಂದಿಗೆ ಕಾರ್ಯಕ್ರಮ ಪ್ರಾರಂಭವಾಗಿ ಬ್ಯಾಂಡ್ ತಂಡದೊಂದಿಗೆ ನಗರದ ಪ್ರಮುಖ ಬೀದಿಗಳಲ್ಲಿ ಪಥಚಲನೆಯೊಂದಿಗೆ ಗುರುಭವನ ಮೊಳಕಾಲ್ಮೂರು ಇಲ್ಲಿ ಕೊನೆಗೊಂಡಿತು, ನಂತರ ಶ್ರೀ ಕೆ. ರೇವಣ್ಣ ಸಮಾಜ ಸೇವಕರು ಭಾಗವಹಿಸಿದ ಎಲ್ಲಾ ಮಕ್ಕಳಿಗೂ ಕಂಠವಸ್ತ್ರ ಮತ್ತು ಓಗಲ್ ನೀಡಿದರು. ಶ್ರೀಮತಿ ಉಮಾದೇವಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಗ್ರಾಮ ಪಂಚಾಯತಿ ಅನುದಾನದಲ್ಲಿ ಖರೀದಿಸಿದ ಸಮವಸ್ತ್ರಗಳನ್ನು ನೀಡಿ ಪ್ರತಿಶಾಲೆಯಲ್ಲೂ ಸ್ಕೌಟಿಂಗ್ ಉತ್ತಮವಾಗಿ ಅಭಿವೃದ್ಧಿಯಾಗಲು ತಿಳಿಸಿದರು. ಶ್ರೀ ಹನುಮಂತಪ್ಪ, ತಾಲ್ಲೂಕು ದೈಹಿಕ ಶಿಕ್ಷಣಾಧಿಕಾರಿಗಳು ಸ್ಕೌಟ್ ಸಂಸ್ಥೆಯಿಂದಾಗುವ ಉಪಯೋಗ ತಿಳಿಸಿ, ಸ್ಕೌಟರ್ಸ್, ಗೈಡರ್ಸ್ ಘಟಕಗಳನ್ನು ಉತ್ತಮವಾಗಿ ನಡೆಸಲು ತಿಳಿಸಿದರು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿ ಕಾರ್ಯಕ್ರಮವನ್ನು ಯಶಸ್ವಿಯಾಗಿ ನೆರವೇರಿಸಿದರು.

## ದಕ್ಷಿಣ ಕನ್ನಡ

ಜಿಲ್ಲಾ ಸಂಸ್ಥೆಯಲ್ಲಿ ಇತ್ತೀಚೆಗೆ ನಡೆದ ಸ್ವಾಮಿ ವಿವೇಕಾನಂದರ 150ನೇ ಜಯಂತೋತ್ಸವದ ಆಚರಣೆ ಸಮಯದಲ್ಲಿ ರಾಜ್ಯ ಪುರಸ್ಕಾರ ಸ್ಕೌಟ್, ಗೈಡ್, ಚತುರ್ಥ ಚರಣ್, ಕಬ್ಸ್, ಹೀರಕ್ ಪಂಖ್, ಬುಲ್ ಬುಲ್ಸ್‌ಗಳ ಪ್ರಶಸ್ತಿ ಪ್ರಧಾನ ಸಮಾರಂಭ ಮತ್ತು ಚಿಂತನಾ ದಿನಾಚರಣೆಯನ್ನು ಶ್ರೀ ಎನ್.ಜಿ. ಮೋಹನ್ ಜಿಲ್ಲಾ ಮುಖ್ಯ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ದ.ಕ. ಜಿಲ್ಲೆಯ ವಿವಿಧ ಸಂಸ್ಥೆಗಳಿಂದ ಕಬ್, ಬುಲ್ ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಗಳು ಭಾಗವಹಿಸಿದ್ದರು.

ಮುಖ್ಯ ಅತಿಥಿಯಾಗಿ ಡಾ। ಜೀವರಾಜ್ ಸೊರಕೆ ವ್ಯವಸ್ಥಾಪಕರು ಎಸ್.ಸಿ.ಎಸ್. ಆಸ್ಪತ್ರೆ, ಮಂಗಳೂರು, ಇವರು ರಾಜ್ಯ ಪುರಸ್ಕಾರ್ ಪ್ರಶಸ್ತಿ ಪತ್ರವನ್ನು ಪ್ರದಾನ ಮಾಡಿದರು. ಶ್ರೀ ಸಂತೋಷ್ ಕುಮಾರ್ ಕದ್ರಿ, ಜಿಲ್ಲಾಕಾರ್ಯದರ್ಶಿ ಪ್ರಾಸ್ತಾವಿಕ ಭಾಷಣ ಮಾಡಿದರು.

****************

ಸರಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜ್ ಬೊಕ್ಕಪಟ್ನದ ಸ್ಕೌಟ್ಸ್ ಗೈಡ್ಸ್‌ಗಳಿಂದ ಚಿಂತನಾ ದಿನಾಚರಣೆ ಪ್ರಯುಕ್ತವಾಗಿ ಸರ್ವಧರ್ಮ ಪ್ರಾರ್ಥನೆ ನಡೆಯಿತು. ವಿದ್ಯಾರತ್ನ ಆಂಗ್ಲ ಮಾಧ್ಯಮ ಶಾಲೆಯ ಸ್ಕೌಟ್ಸ್ ಗೈಡ್ಸ್‌ಗಳು ಮನರಂಜನೆ ಕಾರ್ಯಕ್ರಮ ನಡೆಸಿಕೊಟ್ಟರು.

ದಿವಂಗತ ಐ. ಎ. ಕೈರನ್ನನವರನ್ನು ಈ ಸಂದರ್ಭದಲ್ಲಿ ಸ್ಮರಿಸಲಾಯಿತು. ಶ್ರೀಮತಿ ಐರಿನ್. ಡಿ' ಕುನ್ಹ ಜಿಲ್ಲಾ ಆಯುಕ್ತರು(ಗೈಡ್ಸ್) ಸ್ವಾಗತಿಸಿದರು. ಶ್ರೀ ವಾಸುದೇವ್ ಬೋಳೂರು, ಜಿಲ್ಲಾ ಕೋಶಾಧಿಕಾರಿ ಧನ್ಯವಾದ ನೀಡಿದರು. ಶ್ರೀಮತಿ ಸುನಿತಾ ಎ.ಎಲ್.ಟಿ. (ಗೈಡ್) ಕಾರ್ಯಕ್ರಮ ನಿರ್ವಹಣೆ ಮಾಡಿದರು.

***************

ದಿನಾಂಕ 01-03-2013 ಮತ್ತು 02-03-2013 ರಂದು ಸ್ಥಳೀಯ ಸಂಸ್ಥೆ, ಸುರತ್ಕಲ್ ಇದರ ವಾರ್ಷಿಕ ರ್‍ಯಾಲಿಯು ಪಾಪ್ಯುಲರ್ ಬಂಟ್ಸ್ ಆಂಗ್ಲ ಮಾಧ್ಯಮ ಪ್ರೌಢಶಾಲೆ, ಮಳವೂರು, ಬಜಪೆ ಅವರ ಜಂಟಿ ಆಶ್ರಯದಲ್ಲಿ ಜರುಗಿತು. ಈ ಕಾರ್ಯಕ್ರಮವನ್ನು ದ. ಕನ್ನಡ ಜಿಲ್ಲೆಯ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ಉದ್ಘಾಟಿಸಿದರು. ಗೌರವಾನ್ವಿತ ಅಧ್ಯಕ್ಷರಾದ ಶ್ರೀ ಕೆ. ಗೋಪಾಲಕೃಷ್ಣ ಪ್ರಭು ಮತ್ತು ಅತಿಥಿಗಳಾಗಿ ಪಾಪ್ಯುಲರ್ ಬಂಟ್ಸ್ ಆಂಗ್ಲಮಾಧ್ಯಮ ಪ್ರೌಢಶಾಲೆಯ ಸ್ಥಾಪಕ ಕಾರ್ಯಾಧ್ಯಕ್ಷರು ಹಾಗು ಸಂಚಾಲಕರಾದ ಶ್ರೀ ಜಗದೀಶ ಸಿ. ಶೆಟ್ಟಿ ಹಾಗೂ ಶ್ರೀ ರಾಮಶೇಷ ಶೆಟ್ಟಿ, ಆಯುಕ್ತರು ಸ್ಕೌಟ್ಸ್, ಶ್ರೀ ಸಂತೋಷ್ ಕುಮಾರ್ ಕದ್ರಿ, ದ.ಕನ್ನಡ ಮಂಗಳೂರು ಕನ್ನಡ ಜಿಲ್ಲಾ ಪಂಚಾಯತ್ ನ ಉಪಾಧ್ಯಕ್ಷರಾದ ಶ್ರೀಯುತ ರಿತೇಶ್ ಶೆಟ್ಟಿ, ಶ್ರೀ ಉಮೇಶ್ ರಾವ್ ಎಕ್ಕಾರೆ ನಿವೃತ್ತ ಉಪ ಪ್ರಾಂಶುಪಾಲರು ಎಸ್.ಡಿ.ಪಿ.ಟಿ. ಕಾಲೇಜು ಕಟೀಲ್ ರೋ. ರೋಟ್ ಫ್ರಾಂಕ್ಲಿನ್ ರೇಗೋ, ಅಧ್ಯಕ್ಷರು ರೊಟರಿ ಕ್ಲಬ್ ಬಜಪೆ ಹಾಗೂ ಪಾಪ್ಯುಲರ್ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀಯುತ ಎಡ್ರಿಯನ್ ದಾಂತಿಸ್ ರವರು ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಕಾಂತ ಚಿಪ್ಳೂಣಕರ್ ಸ್ವಾಗತಿಸಿದರು. ಕಾರ್ಯದರ್ಶಿಯಾದ ಶ್ರೀ ಸೂರಪ್ಪಯ್ಯ ಕಾರಣಿಕ್ ವಂದಿಸಿದರು. ರ್‍ಯಾಲಿಯ ನಾಯಕರಾದ ಶ್ರಿ ವಸಂತ ಕಾರಂತರ ನೇತೃತ್ವದಲ್ಲಿ ಬೆಂಕಿ ಬಳಸದೇ ಅಡುಗೆ, ಕರಕುಶಲ ವಸ್ತು ತಯಾರಿ, ಗ್ರಹಣ ಶಕ್ತಿ ಪರೀಕ್ಷೆಯ ಆಟಗಳು, ಸಾಹಸಮಯ ಆಟಗಳು, ಬಿ.ಪಿ.ವ್ಯಾಯಾಮ ಸರ್ವಧರ್ಮ ಪ್ರಾರ್ಥನೆ, ಧ್ವಜವಂದನೆ ಭವ್ಯ ಶಿಬಿರಾಗ್ನಿ ಧ್ವಜಸ್ತಂಭ ರಚನೆ, ದೇಶಭಕ್ತಿ ಗೀತೆ, ಪಯೋನಿಯರಿಂಗ್, ಪ್ರಾಜೆಕ್ಟ್ ಇತ್ಯಾದಿ ಚಟುವಟಿಕೆಗಳು ಜರುಗಿತು.

**************

ದಿನಾಂಕ 22-03-2013 ರಂದು ಸರಕಾರಿ ಪ್ರಥಮ ದರ್ಜೆ ಕಾಲೇಜು, ಸುಳ್ಯ ಇಲ್ಲಿ ರೋವರ್ಸ್ - ರೇಂಜರ್ಸ್ ಘಟಕಗಳ ಉದ್ಘಾಟನೆ ಮತ್ತು ತರಬೇತಿ ಕಾರ್ಯಕ್ರಮವನ್ನು ಸುಳ್ಯ ಕೊಡಿಯಾಲ್ ಬೈಲ್ ಕಾಲೇಜು ಆವರಣದಲ್ಲಿ ಜರುಗಿತು. ಈ ಸಮಾರಂಭವು ಶ್ರೀ ದಾಮೋದರ ಕನಜಾಲು ಪ್ರಾಂಶುಪಾಲರು ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀ ಎಸ್.ಎಂ. ಬಾಪೂ ಸಾಹೇಬ್ ಅಧ್ಯಕ್ಷರು ಸ್ಥಳೀಯ ಸಂಸ್ಥೆ ಸ್ಕೌಟ್ಸ್-ಗೈಡ್ಸ್ ಸುಳ್ಯ, ಶ್ರೀ ಜಾರ್ಜ್ ಡಿ'ಸೋಜ ಕಾರ್ಯದರ್ಶಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಸುಳ್ಯ, ಶ್ರೀ ಅಬೂಬಕ್ಕರ್ ಕೋಶಾಧಿಕಾರಿಗಳು ಸ್ಥಳೀಯ ಸಂಸ್ಥೆ ಸುಳ್ಯ ಇವರು ಭಾಗವಹಿಸಿ ನೂತನ ಘಟಕಗಳಿಗೆ ಶುಭ ಹಾರೈಸಿದರು. ರೋವರ್ ಲೀಡರ್ ಪದ್ಮನಾಭ ಕೆ. ಸ್ವಾಗತಿಸಿ, ಪ್ರಾಸ್ತಾವಿಕ ಮಾತನಾಡಿದರು. ಶ್ರೀಮತಿ ದಿವ್ಯ ಟಿ.ಎಸ್. ರೇಂಜರ್ ಲೀಡರು ಧನ್ಯವಾದ ನೀಡಿದರು.

## ಮೈಸೂರು

ದಿನಾಂಕ 27-03-2013 ರಂದು ಮೈಸೂರಿನ ಊಟಿರಸ್ತೆಯ ಜೆ.ಎಸ್.ಸ್. ಕಲಾ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜಿನಲ್ಲಿ ರೋವರ್ಸ್ ಮತ್ತು ಯೂತ್ ರೆಡ್ ಕ್ರಾಸ್ ಘಟಕಗಳ ಉದ್ಘಾಟನೆ ಕಾರ್ಯಕ್ರಮ ಜರುಗಿತು. ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ರೋವರ್ಸ್ ಘಟಕವನ್ನು ಉದ್ಘಾಟಿಸಿ ಮಾತನಾಡುತ್ತಾ ಈಗಿನ ಯುವಕರಲ್ಲಿ ಸಾಮಾಜಿಕ ಪ್ರಜ್ಞೆ, ಸಹಾಯ ಮತ್ತು ಸಹಕಾರ ಮನೋಭಾವಗಳು ಕಡಿಮೆಯಾಗುತ್ತಿದೆ. ಇವುಗಳನ್ನು ಬೆಳೆಸುವುದು ರೋವರ್ಸ್ ಮತ್ತು ರೆಡ್ ಕ್ರಾಸ್ ನಂತಹ ಸೇವಾ ಸಂಸ್ಥೆಗಳ ಮುಖ್ಯ ಉದ್ದೇಶವಾಗಿದೆ. ಈ ಒಂದು ಘಟಕವನ್ನು ಜೆ.ಎಸ್.ಎಸ್. ಕಾಲೇಜಿನಲ್ಲಿ ಪ್ರಾರಂಭಿಸುತ್ತಿರುವುದು ಶ್ಲಾಘನೀಯವಾಗಿದೆ ಎಂದು ಅಭಿಪ್ರಾಯಪಟ್ಟರು. ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಪ್ರೊ ಎಂ. ರುದ್ರಯ್ಯ ನೋಡಲ್ ಆಫಿಸರ್, ಯೂತ್ ರೆಡ್ ಕ್ರಾಸ್ ಹಾಗೂ ಎನ್.ಎಸ್.ಎಸ್. ಕಾರ್ಯಕ್ರಮಾಧಿಕಾರಿ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಇವರು ಯೂತ್ ರೆಡ್ ಕ್ರಾಸ್ ಘಟಕವನ್ನು ಉದ್ಘಾಟಿಸಿ ಯುವಜನರಲ್ಲಿ ಧೈರ್ಯ, ಸಾಹಸ ಹಾಗೂ ಕಷ್ಟದಲ್ಲಿರುವವರಿಗೆ ಸಹಾಯ ಮಾಡುವಂತಹ ಗುಣಗಳನ್ನು ಬೆಳೆಸಲು ರೆಡ್ ಕ್ರಾಸ್‌ನಂತಹ ಸಂಸ್ಥೆಗಳು ನೆರವಾಗುತ್ತವೆ ಎಂದು ತಿಳಿಸಿದರು. ಇದೇ ಸಂದರ್ಭದಲ್ಲಿ ಮಾತನಾಡಿದ ಮೈಸೂರು ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವಿಭಾಗದ ಕಾರ್ಯದರ್ಶಿಗಳಾದ ಡಾ॥ ಗುರುಮೂರ್ತಿ ಯವರು ನೇರವಾಗಿ ನಡೆಯುವುದು ಮತ್ತು ನುಡಿಯುವುದನ್ನು ವಿದ್ಯಾರ್ಥಿಗಳು ಆ ಕಾರಣ ಕಡ್ಡಾಯವಾಗಿ ಸ್ಕೌಟ್ಸ್, ಗೈಡ್ಸ್ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳಬೇಕೆಂದು ತಿಳಿಸಿದರು. ಪ್ರೊ. ಟಿ.ವಿ. ಸಾಂಬಶಿವಯ್ಯ ಪ್ರಾಚಾರ್ಯರು, ಜೆ.ಎಸ್.ಎಸ್. ಕಾಲೇಜು ಊಟಿ ರಸ್ತೆ, ಮೈಸೂರು ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಕಾಲೇಜಿನ ಶೈಕ್ಷಣಿಕ ಡೀನ್ ಪ್ರೊ. ಎಂ.ಬಿ. ಮಲ್ಲಿಕಾರ್ಜುನ ಪಂಡಿತ್ ರವರು ಉಪಸ್ಥಿತರಿದ್ದರು.

ಕು. ವಿದ್ಯಾಶ್ರೀ ಯವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾದ ಸಮಾರಂಭದಲ್ಲಿ ಶ್ರೀ ಎಂ.ಎಸ್. ವೆಂಕಟರಾವ್ ಸ್ವಾಗತಿಸಿದರು. ಶ್ರೀ ಟಿ.ಎಂ. ಮರಿಸ್ವಾಮಿಯವರು ವಂದಿಸಿದರು. ಪ್ರೊ. ಹೆಚ್. ಎಸ್. ನಾಗೇಂದ್ರಕುಮಾರ್ ನಿರೂಪಿಸಿದರು.

## ಬೆಳಗಾವಿ

ಇತ್ತೀಚೆಗೆ ಸಿ.ಎಸ್.ಬಿ. ಕಲಾ ಮಹಾವಿದ್ಯಾಲಯದಲ್ಲಿ ಶ್ರೀ ಎಂ.ಆರ್.ಪಿ. ವಿಜ್ಞಾನ ಮಹಾವಿದ್ಯಾಲಯ ಮತ್ತು ಜಿ.ಎಲ್.ಆರ್. ವಾಣಿಜ್ಯ ಮಹಾವಿದ್ಯಾಲಯ ರಾಮದುರ್ಗದಲ್ಲಿ ನೂತನವಾಗಿ "ರೋವರ್ ಮತ್ತು ರೇಂಜರ್ ಘಟಕಗಳ ಉದ್ಘಾಟನಾ ಸಮಾರಂಭ ಜರುಗಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಪಿ.ಎಂ. ಜಗತಾಪ, ನ್ಯಾಯವಾದಿಗಳು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಡಿ.ಬಿ. ಅತ್ತಾರ ಜಿಲ್ಲಾ ಸಂಘಟಕರು ಬೆಳಗಾವಿ ಇವರು ಆಗಮಿಸಿದ್ದರು. ಸಹೋದರ ಸಂಸ್ಥೆಯ ಪ್ರೌಢಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ವ್ಹಿ. ಟಿ. ಜಂಬಗಿ, ಶ್ರೀ ಆರ್. ಟಿ. ಬಳಿಗಾರ ಬಿ.ಇ.ಓ. ಪ್ರಾಚಾರ್ಯರಾದ ಪ್ರೊ. ಕೆ.ವಿ. ಪಾಟೀಲ ಹಾಗೂ ರೋವರ್ ನಾಯಕರಾದ ಡಾ॥ ಕೆ.ಎಸ್. ಲಮಾಣಿ, ರೇಂಜರ್ ನಾಯಕಿಯರಾದ ಪ್ರೊ. ವ್ಹಿ.ಎಸ್. ಜೋಶಿ, ಗೈಡ್ ಕ್ಯಾಪ್ಟನ್ ಕು. ಎಸ್. ವಿ. ಶಾಳೆ, ಸ್ಕೌಟರ್ ಆದ ಶ್ರೀ ಪಿ.ಎಸ್. ನಡಮನಿ ಹಾಗೂ ಎಲ್ಲಾ ಪ್ರಾಧ್ಯಾಪಕ ವೃಂದದವರು ಉಪಸ್ಥಿತರಿದ್ದರು.

ಪ್ರಾಚಾರ್ಯರಾದ ಕೆ. ವ್ಹಿ. ಪಾಟೀಲರು ಸ್ವಾಗತಿಸಿ ಅತಿಥಿಗಳನ್ನು ಪರಿಚಯಿಸಿದರು. ಪ್ರೊ. ವ್ಹಿ.ಎಸ್. ಜೋಷಿಯವರು ಪ್ರಾಸ್ತಾವಿಕ ನುಡಿಗಳನ್ನು ನುಡಿದರು. ಡಾ॥ ಕೆ.ಎಸ್. ಲಮಾಣಿಯವರು ವಂದಿಸಿದರು.

## ಕೊಪ್ಪಳ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಗಂಗಾವತಿ ಮತ್ತು ಕೆಂದೊಳ್ಳೆ ರಾಮಣ್ಣ ಪ್ರೌಢ ಶಾಲೆ ಕೊಪ್ಪಳ ರೋಡ್ ವಡ್ಡರಹಟ್ಟಿ, ತಾ: ಗಂಗಾವತಿ ಇವರ ಸಂಯುಕ್ತ ಆಶ್ರಯದಲ್ಲಿ ದಿನಾಂಕ 23-02-2013 ರಂದು ಸ್ಕೌಟ್ ಸಂಸ್ಥಾಪಕ ಲಾರ್ಡ್ ಬೇಡನ್ ಪೋವೆಲ್ಲರ ಜನ್ಮ ದಿನಾಚರಣೆ ಮತ್ತು ಒಂದು ದಿನದ ಮಕ್ಕಳ ಮೇಳ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು.

ಆ ದಿನ ಬೆಳಗ್ಗೆ ಶ್ರೀ ಕೆಂದೊಳ್ಳೆ ರಾಮಣ್ಣ ಪ್ರೌಢ ಶಾಲೆ ಆವರಣದಲ್ಲಿ ಪಥಚಲನೆಯನ್ನು ಉದ್ಘಾಟಿಸಲಾಯಿತು. ಅನಂತರ ರಸಪ್ರಶ್ನೆ ಕಾರ್ಯಕ್ರಮ ಮತ್ತು ಗಂಟುಗಳ ಸ್ಪರ್ಧೆ ನಡೆಸಲಾಯಿತು. ಇದರ ಉಸ್ತುವಾರಿಯನ್ನು ಶ್ರೀ ಎ. ಯರ್ರಣ್ಣ, ಡಿ.ಟಿ.ಸಿ., ಸ್ಥಳೀಯ ಸಂಸ್ಥೆ ಗಂಗಾವತಿ ಇವರು ನಿರ್ವಹಿಸಿದರು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರಿ ಹೆಚ್.ಎಂ. ಸಿದ್ಧರಾಮಯ್ಯಸ್ವಾಮಿ ಆಯುಕ್ತರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕೊಪ್ಪಳ ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಅರುಣಾ ವಸ್ತ್ರದ ಎ.ಡಿ.ಸಿ.,(ಗೈಡ್ಸ್) ಎ. ಯರ್ರಣ್ಣ, ಉಪಾಧ್ಯಕ್ಷರು ಸ್ಥಳೀಯ ಸಂಸ್ಥೆ ಗಂಗಾವತಿ, ಶ್ರೀ ಸೈಯದ್ ಮಹ್ಮದ್ ಗುತ್ತಿ ಸ್ಥಾನಿಕ ಆಯುಕ್ತರು, ಗಂಗಾವತಿ, ಕಾರ್ಯದರ್ಶಿ ಶ್ರೀ ಸಂಗಯ್ಯಾಸ್ವಾಮಿ ಸಹಕಾರ್ಯದರ್ಶಿ ಶಿವಪ್ರಸಾದ್ ಚನ್ನಬಸಪ್ಪ ಕೋಶಾಧ್ಯಕ್ಷರು ಉಪಸ್ಥಿತರಿದ್ದರು. ಶ್ರೀ ಕೆಂದೊಳ್ಳೆ ರಾಮಣ್ಣ ಪ್ರೌಢ ಶಾಲೆಯ ಅಧ್ಯಕ್ಷರು ಶ್ರೀ ಕೃಷ್ಣಪ್ಪ, ನಿರ್ದೇಶಕರಾದ ಡಾ॥ ಗಣೇಶ ರಾಹುತ್, ನಾರಾಯಣಪ್ಪ, ನಾಗಪ್ಪ ನಿವೃತ್ತ ಅಸಿಸ್ಟೆಂಟ್ ಕಮೀಷನರ್, ಶ್ರೀ ಕೆಂದೊಳ್ಳೆ ರಾಮಣ್ಣ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಮದ್ದಾನೆಪ್ಪ, ನಾಜಿರಾಬೇಗಂ ಹಾಗೂ ಬಸಪ್ಪ ಉಪಸ್ಥಿತರಿದ್ದರು.

## ಶಿವಮೊಗ್ಗ

ದಿನಾಂಕ 09-02-2013 ರಿಂದ 11-02-2013 ರ ವರೆಗೆ ಜಿಲ್ಲಾ ಮಟ್ಟದ ಪುರಸ್ಕಾರ (ತೃತೀಯ ಸೋಪಾನ) ತರಬೇತಿ/ ಪರೀಕ್ಷಾ ಶಿಬಿರ ಹಾರೂ ಪ್ರಶಸ್ತಿ ಪ್ರದಾನ ಸಮರಂಭ ವನ್ನು ಜಿಲ್ಲಾ ಸ್ಕೌಟ್ ಭವನದ ಆವರಣದಲ್ಲಿ ಹಮ್ಮಿಕೊಳ್ಳಾಗಿತ್ತು. ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು. ಜಿಲ್ಲಾ ಪುರಸ್ಕಾರ ಪ್ರಶ್ನೆ ಪತ್ರಿಕೆಯನ್ನು ಕೊಟ್ಟು ಪರೀಕ್ಷೆ ನಡೆಸಲಾಯಿತು. ನಂತರ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಆಯೋಜಿಸಲಾಯಿತು. ಸಮಾರಂಭವು ಸಾಮೂಹಿಕ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಶ್ರೀಯುತ ವಿಪುಲ್ ಬನ್ಸಾಲ್, ಭಾ.ಆ.ಸೇ. ರವರು ಆಗಮಿಸಿದ್ದರು. ಶ್ರೀ ಕೆ.ಪಿ. ಬಿಂದುಕುಮಾರ್ ಜಿಲ್ಲಾ ಕಾರ್ಯದರ್ಶಿ ಸರ್ವರನ್ನು ಸ್ವಾಗತಿಸಿ ತೃತೀಯ ಸೋಪಾನ, ಜಿಲ್ಲಾ ಪುರಸ್ಕಾರದ ಬಗ್ಗೆ ಮಾಹಿತಿ ನೀಡಿದರು. ಶ್ರೀಮತಿ ಅರುಣಮಾಲಾ, ಎ.ಎಲ್.ಟಿ., (ಜಿ) ಶಿಬಿರದ ವರದಿಯನ್ನು ವಾಚಿಸಿದರು. ಜಿಲ್ಲಾ ಪುರಸ್ಕಾರಕ್ಕೆ ಅರ್ಹತೆ ಪಡೆದ ಎಲ್ಲಾ ಸ್ಕೌಟ್ಸ್-ಗೈಡ್ಸ್‌ಗಳಿಗೆ ಶ್ರೀಯುತ ವಿಪುಲ್ ಬನ್ಸಾಲ್ ರವರು ಜಿಲ್ಲಾ ಪುರಸ್ಕಾರ ಪ್ರಮಾಣ ಪತ್ರ ವಿತರಿಸಿದರು. ಶ್ರೀಮತಿ ಎಸ್.ವೈ. ಅರುಣಾದೇವಿ ಜಿಲ್ಲಾ ಆಯುಕ್ತರು ಗೈಡ್‌ಗಳಿಗೆ ಹಿತವಚನ ನೀಡಿದರು. ಶ್ರೀಯುತ ವಿಪುಲ್ ಬನ್ಸಾಲ್ ರವರು ಮಾತನಾಡುತ್ತಾ ಸ್ಕೌಟ್/ಗೈಡ್ ಶಿಕ್ಷಣವು ವಿದ್ಯಾರ್ಥಿಗಳಲ್ಲಿ ಶಿಸ್ತು ಮತ್ತು ಸಾಮಾಜಿಕ ಭದ್ರತೆ ಜೊತೆಗೆ ದೈಹಿಕ ಮಾನಸಿಕ ಸದೃಢತೆ ಹೊಂದಲು ಸಹಾಯಕವಾಗಲಿದೆ. ಎಂದು ಅಭಿಪ್ರಾಯ ಪಟ್ಟರು.

ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ ಜಿಲ್ಲಾ ಮುಖ್ಯ ಆಯುಕ್ತರು ಮಾತನಾಡುತ್ತಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಮುಂದಿನ ವರ್ಷ ಜಿಲ್ಲಾ ಪುರಸ್ಕಾರ ಪಡೆಯಲೆಂದು ಆಶಿಸಿದರು. ಶ್ರೀ ಎಸ್. ಉಮೇಶ್ ಜಿಲ್ಲಾ ಆಯುಕ್ತರು (ಸ್ಕೌ) ಸರ್ವರಿಗೂ ವಂದಿಸಿದರು. ಸಮಾರಂಭವನ್ನು ಶ್ರೀ ಕೆ. ರವಿ ಎ.ಡಿ.ಸಿ.(ಎಸ್.) ಇವರು ನಿರೂಪಿಸಿದರು. ಶ್ರೀಯುತ ಗಣಪತಿ ಎ.ಡಿ.ಸಿ.(ಎಸ್) ಉಪಸಮನ್ವಯಾಧಿಕಾರಿಗಳು ಸ.ಶಿ. ಇ. ಹಾಗೂ ಶ್ರೀ ಹೆಚ್. ಪರಮೇಶ್ವರ ಜಿಲ್ಲಾ ಖಜಾಂಚಿ ಉಪಸ್ಥಿತರಿದ್ದರು.

ದಿನಾಂಕ 12-03-2013 ರಂದು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸಮನೆ ಭದ್ರಾವತಿಯಲ್ಲಿ ಧ್ವಜಾರೋಹಣ ಕಾರ್ಯಕ್ರಮ ಪ್ರಾರಂಭವಾಗಿ ಸಾಮೂಹಿಕ ಪ್ರಾರ್ಥನೆ ಮಾಡಲಾಯಿತು. ರೋವರ್/ರೇಂಜರ್ ಟೀಂ. ಗಳ ಉದ್ಘಾಟನಾ ಕಾಯಕ್ರಮಕ್ಕೆ ಶ್ರೀಮತಿ ನಿವೇದಿತಾ ಆಂಗ್ಲ ಸಹ ಪ್ರಾಧ್ಯಾಪಕರು (ರೇಂಜರ್ ಲೀಡರ್) ಎಲ್ಲರನ್ನೂ ಸ್ವಾಗತಿಸಿದರು. ಕಾಲೇಜ್ ಘಟಕ ಉದ್ಘಾಟನೆಯನ್ನು ಶ್ರೀಯುತ ಎಸ್. ಉಮೇಶ್ ಶಾಸ್ತ್ರಿ, ಜಿಲ್ಲಾ ಆಯುಕ್ತರು (ಸ್ಕೌಟ್) ಜಿಲ್ಲಾ ಸಂಸ್ಥೆ, ಶಿವಮೊಗ್ಗ ಇವರು ನೆರವೇರಿಸಿಕೊಟ್ಟರು. ಪ್ರಾಸ್ತಾವಿಕ ನುಡಿಯನ್ನು ಶ್ರೀಯುತ ಜಿ. ನಾರಾಯಣರಾವ್, ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸಮನೆ ಭದ್ರಾವತಿ. ಇವರು ತಮ್ಮ ನುಡಿಗಳಲ್ಲಿ ಸ್ಕೌಟ್ಸ್-ಗೈಡ್ಸ್ ಇತಿಹಾಸ ಸ್ಥಾಪಕರು, ಚಳುವಳಿಯ ಬಗ್ಗೆ ವಿವರಣೆ ನೀಡಿದರು.

ಮುಖ್ಯ ಅತಿಥಿಗಳಲ್ಲಿ ಒಬ್ಬರಾದ ಶ್ರೀಪದ್ಮಾ ಪಟ್ಟಾಭಿರಾಮನ್, ಸ್ಥಾನಿಕ ಆಯುಕ್ತರು, ಸ್ಕೌಟ್ಸ್-ಗೈಡ್ಸ್‌ನಲ್ಲಿರುವ ವಿಭಾಗಗಳಾದ ಬನ್ನೀಸ್, ಕಬ್ಸ್/ಬುಲ್ ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್-ರೇಂಜರ್, ಇತ್ಯಾದಿಗಳ ಬಗ್ಗೆ ವಿವರಣೆ ನೀಡಿದರು.

ಇನ್ನೋರ್ವ ಮುಖ್ಯ ಅತಿಥಿಗಳಾದ ಶ್ರೀಮತಿ ದೀಪಶ್ರೀ ಜಿಲ್ಲಾ ಸಂಘಟಕರು ಕಾಲೇಜಿನಲ್ಲಿ ರೋವರ್/ರೇಂಜರ್ ಘಟಕಗಳನ್ನು ಸ್ಥಾಪಿಸಿ ವಿದ್ಯಾರ್ಥಿಗಳಲ್ಲಿ ನಾಯಕತ್ವ, ಶಿಸ್ತುಗಳ ಬಗ್ಗೆ ಅರಿವು ಮೂಡಿಸಬೇಕು ಎಂದರು.

ಇನ್ನೋರ್ವ ಅತಿಥಿಗಳಾದ ಶ್ರೀಯುತ ಎನ್. ನಾರಾಯಣಪ್ಪ, ಅಧ್ಯಕ್ಷರು, ಸ್ಥಳೀಯ ಸಂಸ್ಥೆ, ಭದ್ರಾವತಿ ಇವರ ಸಹ ಸ್ಕೌಟ್ಸ್-ಗೈಡ್ಸ್ ರೋವರ್/ರೇಂಜರ್‌ಗಳ ಬಗ್ಗೆ ವಿವರಿಸಿದರು.

ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದ ಕಾಲೇಜಿನ ಪ್ರಾಂಶುಪಾಲರಾದ ಶ್ರೀಯುತ ಎಂ. ಚಂದ್ರಪ್ಪನವರು ಅಧ್ಯಕ್ಷರ ನುಡಿಯಲ್ಲಿ ಉಪನ್ಯಾಸಕ ರೋವರ್ ಸಂಚಾಲಕರು ಹಾಗೂ ಶ್ರೀಮತಿ ನಿವೇದಿತಾ, ರೇಂಜರ್ ಸಂಚಾಲಕರು ಘಟಕಕ್ಕೆ ಸೇರಿ, ತಮ್ಮ ಕಾಲೇಜಿನಲ್ಲಿ ಈ ಘಟಕವನ್ನು ಸ್ಥಾಪಿಸಿರುವುದಕ್ಕೆ ಧನ್ಯವಾದಗಳನ್ನು ತಿಳಿಸಿದರು.

ಕಾರ್ಯಕ್ರಮದ ವಂದನಾರ್ಪಣೆ ಕಾರ್ಯಕ್ರಮವನ್ನು ರೋವರ್ ಸಂಚಾಲಕರಾದ ವಾಸ್ಯಾ ನಾಯ್ಕರು ನಡೆಸಿಕೊಟ್ಟರು, ಕಾರ್ಯಕ್ರಮವನ್ನು ಕು॥ ಪರಿಮಳ ವಿದ್ಯಾರ್ಥಿನಿ ನಿರೂಪಿಸಿದರು.

## ಚಾಮರಾಜನಗರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಮತ್ತು ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ದಿನಾಂಕ 25-02-2013 ರಂದು ಲಾರ್ಡ್ ಬೇಡನ್ ಪಾವೆಲ್ ಮತ್ತು ಲೇಡಿ ಬೇಡನ್ ಪಾವೆಲ್ ರವರ ಚಿಂತನಾ ದಿನಾಚರಣೆಯನ್ನು ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಉಪ್ಪಾರ ಬೀದಿ ಚಾಮರಾಜನಗರದಲ್ಲಿ ನಡೆಸಲಾಯಿತು. ನಂತರ ಸಮಾರಂಭವನ್ನು ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀಮತಿ ಜಿ. ನಾಗಶ್ರೀ ರವರು ಉದ್ಘಾಟಿಸಿ ಮಾತನಾಡುತ್ತ ಸ್ಕೌಟ್ ಮತ್ತು ಗೈಡ್‌ನಲ್ಲಿ ತೊಡಗಿಸಿಕೊಳ್ಳುವುದರಿಂದ ಸೇವಾ ಮನೋಭಾವ ಬೆಳೆಸಿಕೊಳ್ಳುವುದರ ಜೊತೆಗೆ ಶಿಸ್ತು ಸಂಯಮ ಹೇಳಿಕೊಡುತ್ತದೆ. ಎಂದರು. ಸ್ಕೌಟ್ಸ್ ಆಯುಕ್ತರಾದ ವಿ. ಮಲ್ಲಿಕಾರ್ಜುನ ಸ್ವಾಮಿರವರು ಮಾತನಾಡುತ್ತ ಈ ಬಾರಿ ರಾಜ್ಯ ಪುರಸ್ಕಾರವನ್ನು ಪಡೆದ ಸ್ಕೌಟ್-ಗೈಡ್‌ಗಳನ್ನು ರಾಷ್ಟ್ರಪತಿ ಪುರಸ್ಕಾರ ಪಡೆಯುವಂತೆ ಉತ್ತೇಜನ ನೀಡಬೇಕೆಂದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಜಿ.ಆರ್. ಅಶ್ವತ್ಥ ನಾರಾಯಣರವರು ಅಧ್ಯಕ್ಷತೆ ವಹಿಸಿದ್ದರು. ಸಮಾರಂಭದಲ್ಲಿ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀಮತಿ ರತ್ನಮ್ಮ ಜಿಲ್ಲಾ ಕಾರ್ಯದರ್ಶಿಗಳಾದ ಕೆ.ಎಸ್. ಮಹದೇವಸ್ವಾಮಿ ಉಪಸ್ಥಿತರಿದ್ದರು. ಬೇಡನ್ ಪಾವೆಲ್‌ರ ಬಗ್ಗೆ ಹೆಚ್.ಎ. ನರಸಿಂಹಲು ಪ್ರಾಸ್ತಾವಿಕ ನುಡಿ ಹೇಳಿದರು. ಸ್ಥಳೀಯ ಕಾರ್ಯದರ್ಶಿ ಹೆಚ್.ಎಲ್. ರೇವಣ್ಣ ಸ್ವಾಗತಿಸಿದರು.

## ಬೀದರ್

ದಿನಾಂಕ 16-03-2013 ರಂದು ಕನ್ನಿಕಾ ಪರಮೇಶ್ವರರಿ ಪ್ರಾಥಮಿಕ ಮತ್ತು ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಂದ ಒಂದು ದಿನದ ಹೊರಸಂಚಾರವನ್ನು ಮಾಣಿಕೇಶ್ವರ ದಿಗಂಬರ ಮಠಕಾಡಗಾಂವದಲ್ಲಿ ನಡೆಸಲಾಯಿತು. 50 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀ ಬಾಬುರಾವ್ ನಿಂಬೂರೆ, ಎ.ಎಲ್.ಟಿ.(ಎಸ್.) ಮತ್ತು ಎ.ಎಸ್.ಓ.ಸಿ., ಶ್ರೀ ಎ.ಎಸ್. ಶಿವುಕುಮಾರ ಶಿಬಿರದ ನಾಯಕತ್ತ್ವ ವಹಿಸಿದ್ದರು. ವನವಿದ್ಯೆ ಸಂಕೇತದೊಂದಿಗೆ ಶಾಲೆಯಿಂದ ಮಾಣಿಕೇಶ್ವರ ದಿಗಂಬರ ಮಠ ಕಾಡಗಾಂವ ತಲುಪಿ ಅಲ್ಲಿ ಧ್ವಜವಂದನೆ. ಕಾರ್ಯಕ್ರಮವನ್ನು ನೆರವೇರಿಸಲಾಯಿತು. ಅಧ್ಯಕ್ಷತೆಯನ್ನು ಕನ್ನಿಕಾಪರಮೇಶ್ವರಿ ಪ್ರೌಢಶಾಲೆ ಮುಖ್ಯೋಪಾಧ್ಯಾಯರು ವಹಿಸಿ ಈ ಹೊರ ಸಂಚಾರದ ವಿಷಯ, ಹಿನ್ನೆಲೆಯನ್ನು ವಿವರಿಸಿದರು. ಕನ್ನಿಕಾಪರಮೇಶ್ವರಿ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರು ಈ ಶಿಬಿರದಿಂದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪರಿಸರ ಅಧ್ಯಯನ ಹೇಗೆ ಮಾಡಬೇಕು ಎಂಬುದು ಅರಿವಾಗುತ್ತದೆ ಎಂದು ತಿಳಿಸಿದರು.

## Bangalore South

The Bharat Scouts & Guides Bangalore South District Association, Conducted a Preparatory Camp for the Prospective Tritya Sopan, Rajyapuraskar Scouts & Guides at Dr. Annie Besant Scout/Guide Camping & Training Center from 13 - 16 April 2013. The Scouts and Guides were divided into Troops and Companies and the Sessions were held accordingly. Around 475 Scouts and Guides participated in the Camp The Troops and Companies were made to take up PIC & COHs during the Camp. Mr. T K Narayanswamy, LT(S) was the Camp Director. Mr. M S Satheesh District Secretary & Mr. Madhusudan A S looked after the overall arrangements of the Camp Mr. N Anand District Treasurer was the Guest for Campfire. Mr. J. Chakravarthy, ALT(S) and Mrs. Jancy Rani, HWB(G) were leaders for Tritya Sopan Scouts & Guides. Mr. M C Chanappa, HWB(S) & Mrs. Usha Damodaran, HWB(G) Were Leaders for Rajyapuraskar Scouts & Guides.



## GONE HOME

# Smt. V.S. RAMADEVI

Former Governor of Karnataka and Former Patron of the Bharat Scouts and Guides, Karnataka Passed away on 17th April 2013 at Bangalore

The President and the Members of the Bharat Scouts and Guides Karnataka record with deep regret the Sad, Sudden and Untimely passing away of SMT V.S.RAMADEVI, Former Governor of Karnataka and Former Patron of the Bharat Scouts and Guides, Karnataka on Wednesday the 17th April 2013 at Bangalore at the age of 79.

Smt V.S.Rama Devi, who hailes from Andhra Pradesh, was born on 15th January 1934. She served as the First Women Chief Election Commissioner of India from 26th November 1990 to 11th December 1990.

She served as the Governor of Himachal Pradesh from 26th July 1997 to 1st December 1999 and the Governor of Karnataka from 2nd December 1999 to 20th August 2002.

She is survived by her Son Sri V.S.Rakesh, Daughters Smt.V.S.Rekha and Smt. V.S. Radhika Choudhary and Large number of relatives.

She was a great supporter of Scout / Guide Movement in Karnataka as Pattern of the organisation.

In this hour of Grief and Sorrow, we join the family Members and others in Praying for the departed Soul.

We Pray God Almighty to give SADGATI to the Departed Soul.

*State Secretary*

---

# Sri J. ABRAHAUM



Former Principal, St. Thomas High School, Honnavar, U.K. District.

The President and the Member of the Bharat Scouts and Guides, Karnataka record with deep regret the sad and sudden passing away of Sri J. ABRAHAUM, Former Principal, St. Thomas High School, Honnavar, U.K. District on 18th April 2013 at Honnavar at the age of 96.

He served as a Scout Master and President, Local Association of the B.S.& G. for more than 30 years. He served as President, Secretary for many Social Service Organisations in Honnavar.

He has received the BEST TEACHER AWARD from the Govt. of Karnataka. He ws acommitted and Dedicated Teacher and a Social Worker of Honnavar Town.

We pray God Almighty to give SADGATI to the Departed Soul.

*State Secretary*

..............ಹಿಂದಿನ ಸಂಚಿಕೆಯಿಂದ

ಅಧ್ಯಾಯ – 3 **ಕಾರ್ಯಸರಣಿ** ಶಿಬಿರಾಗ್ನಿ ಉದಂತ ಸಂ – 9

# ಶಿಬಿರ ಕೌಶಲ್ಯ
# (CAMP CRAFT)

## ಶಿಬಿರದಲ್ಲಿ ಸೌಖ್ಯ – ಆವರಣ – ಶಿಬಿರ ಸರಂಜಾಮು – ಬೀಡುಬಿಡುವುದು ಬೆಂಕಿಯನ್ನು ಅಣಿಮಾಡುವುದು – ಶಿಬಿರವನ್ನು ಚೊಕ್ಕಟವಾಗಿಡುವುದು

### ಅಲೆಮಾರಿ ಶಿಬಿರಗಳು

ಒಂದೇ ಸ್ಥಳದಲ್ಲಿರುವ "ಸ್ಥಾಯೀ ಶಿಬಿರ" (Standing Camps) ಗಳಿಗೆ ಬದಲು, ಬಹಳ ಸ್ಕೌಟ್‌ಗಳು ಅಲೆಮಾರಿ ಶಿಬಿರಗಳನ್ನು (Tramping Camps) ಬಯಸುತ್ತಾರೆ.

ಹೊಸ ಹೊಸ ಜಾಗಗಳನ್ನು ನೋಡುವುದು, ಸ್ವಾರಸ್ಯಕರವಾಗಿರುತ್ತದೆ. ನಿಜ. ಆದರೆ ಅಲೆಮಾರಿ ಶಿಬಿರಗಳು ಹಿತಕರವಾಗಿಯೂ ಸ್ವಾರಸ್ಯಕರವಾಗಿಯೂ ಇರಬೇಕಾದರೆ, ಹವಾ ಗುಣವು ಚೆನ್ನಾಗಿರಬೇಕು.

ಅಲೆಮಾರಿ ಶಿಬಿರವನ್ನು ಏರ್ಪಾಟು ಮಾಡುವುದಕ್ಕೆ ಮುಂಚಿತವಾಗಿ, ನೀವು ಕ್ರಮಿಸುವ ಮಾರ್ಗವನ್ನೂ, ಪ್ರತಿ ದಿನವೂ ರಾತ್ರಿಯ ವೇಳೆಯಲ್ಲಿ ತಂಗುವ ಸ್ಥಳಗಳನ್ನೂ ಮೊದಲೇ ನಿರ್ಧರಿಸಬೇಕು. ಅದೆಲ್ಲವನ್ನೂ, ಸವಿವರವಾಗಿ ಒಂದು ನಕ್ಷೆಯಲ್ಲಿ ಗುರುತಿಸಬೇಕು. ದಿನಕ್ಕೆ 8 ಕಿ.ಮೀ. ನಡೆಯುವುದು, ಸಾಕಷ್ಟು ಸುಖಾನುಭವವನ್ನು ತರುತ್ತದೆಂಬುದನ್ನು ನೀವೇ ಕಂಡುಕೊಳ್ಳುತ್ತೀರಿ.

ನಿಮ್ಮ ಗುಡಾರಗಳು, ಬ್ಲಾಂಕೆಟ್‌ಗಳು, ನೀರು ಸೋಕದ ಟಾರ್ಪಾಲುಗಳು, ಇತ್ಯಾದಿ., ಕೊಂಡೊಯ್ಯಲು, ಒಂದು ಪುಟ್ಟ ಎಳೆಯುವ ಅಥವಾ ತಳ್ಳುವ ಬಂಡಿಯನ್ನು ತಯಾರಿಸಿಕೊಳ್ಳುವ ಯೋಚನೆ ಬರಬಹುದು! ಒಳ್ಳೆಯದೇ!!

### ಶಿಬಿರದ ಸಾಮಾನು ಸರಂಜಾಮು

ನೀವು ಗಮನಿಸಬೇಕಾದ ಮುಂದಿನ ಅಂಶವೆಂದರೆ, ಶಿಬಿರಕ್ಕೆ ಬೇಕಾದ ಸಾಮಾನು, ಸರಂಜಾಮು, ಉದಾ: ಅಡಿಗೆಗೆ ಬೇಕಾದ ಪಾತ್ರೆಗಳು, ಬಕೆಟ್‌ಗಳು, ಉಪಕರಣ, ಸಲಕರಣೆಗಳು ಇತ್ಯಾದಿ.

ಸ್ಥಾಯಿ ಶಿಬಿರಗಳಲ್ಲಿ ಉಪಯೋಗಕ್ಕೆ ಬರುವ ಸಾಮಾನುಗಳ ಪಟ್ಟಿಯನ್ನು, ಈ ಕೆಳಗೆ ಕೊಡಲಾಗಿದೆ. ಅಲೆಮಾರಿ ಶಿಬಿರಗಳು (Tramping Camps) ಮತ್ತು ಒಪ್ಪಾರದ ಶಿಬಿರಗಳಿಗೆ (ತಾತ್ಕಾಲಿಕ ಬೀಡು – Bivouac Shelter Camps) ಅಷ್ಟು ಬೇಕಾಗುವುದಿಲ್ಲ.

..........ಮುಂದುವರೆಯುತ್ತದೆ

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227




***God has given us a world to live in that is full of beauties and wonders and He has given us not only eyes to see them but minds to understand them, if we only have the sense to look at them in that light.***

**Lord Baden-Powell**

***Founder of Scouting***




**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**
ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು



ದಿನಾಂಕ 22.03.2013ರಂದು ದಕ್ಷಿಣ ಕನ್ನಡ ಜಿಲ್ಲೆ ಬೆಳ್ತಂಗಡಿ ಸ್ಥಳೀಯ ಸಂಸ್ಥೆ ವತಿಯಿಂದ ನಡೆದ ರೋವರ್ಸ್-ರೇಂಜರ್ಸ್ ಸಮಾವೇಶ, ಸ್ಕೌಟ್ಸ್-ಗೈಡ್ಸ್ ಮೇಳ ಹಾಗೂ ಕಬ್-ಬುಲ್‌ಬುಲ್ ಉತ್ಸವದ ಉದ್ಘಾಟನಾ ಸಂದರ್ಭದಲ್ಲಿ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಹಾಗೂ ಇತರರನ್ನು ಕಾಣಬಹುದು.



ದಿನಾಂಕ 22.03.2013ರಂದು ಚಿತ್ರದುರ್ಗ ಜಿಲ್ಲಾ ಸಂಸ್ಥೆಯ ಕಛೇರಿಯಲ್ಲಿ "ಕಂಪ್ಯೂಟರ್"ಅನ್ನು ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಉದ್ಘಾಟಿಸಿದರು. ಚಿತ್ರದಲ್ಲಿ ರಾಜ್ಯ ಹಾಗೂ ಜಿಲ್ಲೆ ಮತ್ತು ಸ್ಥಳೀಯ ಸಂಸ್ಥೆಗಳ ಪದಾಧಿಕಾರಿಗಳನ್ನು ಕಾಣಬಹುದು.




ದಿನಾಂಕ 24.03.2013ರಂದು ಬಾಗಲಕೋಟೆ ಜಿಲ್ಲಾ ಸಂಸ್ಥೆಗೆ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಹಾಗೂ ಶ್ರೀ ಸಿ.ಎಸ್.ರೆಡ್ಡಿ ಗೌರವ ರಾಜ್ಯ ತರಬೇತಿ ಆಯುಕ್ತರು ಭೇಟಿ ನೀಡಿದ ಸಂದರ್ಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಸಿ.ಎ. ಸಾವಳಗಿ ಸ್ವಾಗತ ಕೋರುತ್ತಿರುವುದು. ಚಿತ್ರದಲ್ಲಿ ಶ್ರೀ ಜಿ.ಬಿ. ಇದ್ದಲಗಿ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ವೈ. ಬೆಂಡಗೇರಿ, ಜಿಲ್ಲಾ ಕೋಶಾಧಿಕಾರಿ ಹಾಗೂ ಇತರರನ್ನು ಕಾಣಬಹುದು.



ಇತ್ತೀಚೆಗೆ ಬೆಳಗಾವಿ ಜಿಲ್ಲೆ ರಾಮದುರ್ಗ ಸಿ.ಎಸ್.ಬಿ. ಕಲಾ, ಶಾ.ಎಂ.ಆರ್.ಪಿ. ವಿಜ್ಞಾನ ಜಿ.ಎಲ್.ಆರ್. ವಾಣಿಜ್ಯ ಮಹಾ ವಿದ್ಯಾಲಯದಲ್ಲಿ "ರೋವರ್ಸ್ & ರೇಂಜರ್ಸ್" ಘಟಕಗಳನ್ನು ಸಂಸ್ಥೆಯ ಉಪಾಧ್ಯಕ್ಷರು ಹಾಗೂ ನ್ಯಾಯವಾದಿಗಳಾದ ಶ್ರೀ ಪಿ.ಎಂ. ಜಗತಾಪರವರು ಉದ್ಘಾಟಿಸಿದರು. ಚಿತ್ರದಲ್ಲಿ ಶ್ರೀ ಆರ್.ಟಿ.ಬಳಿಗಾರ್ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಪ್ರೊ. ಕೆ.ವಿ. ಪಾಟೀಲ್, ಪ್ರಾಚಾರ್ಯರು, ಶ್ರೀ ಡಿ.ಬಿ. ಅತ್ತಾರ್, ಡಾ॥ ಕೆ.ಎಸ್. ಲಮಾಣಿ ಹಾಗೂ ಇತರರನ್ನು ಕಾಣಬಹುದು.





ದಿನಾಂಕ 13 ರಿಂದ 16 ಏಪ್ರಿಲ್ 2013ರವರೆಗೆ ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆ ಡಾ. ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಹಾಗೂ ಶಿಬಿರ ಕೇಂದ್ರ, ದೊಡ್ಡಬಳ್ಳಾಪುರದಲಿ ಏರ್ಪಡಿಸಿದ್ದ ತೃತೀಯ ಸೋಪಾನ ಹಾಗೂ ರಾಜ್ಯ ಪುರಸ್ಕಾರ ಸ್ಕೌಟ್ಸ್ - ಗೈಡ್ಸ್‌ಗಳ ಪೂರ್ವ ಬಾವಿ ತರಬೇತಿ ಶಿಬಿರದ ವಿವಿಧ ಚಟುವಟಿಕೆಗಳಲ್ಲಿ ಪಾಲ್ಗೊಂಡ ಸ್ಕೌಟ್ಸ್-ಗೈಡ್ಸ್‌ಳ ಚಿತ್ರಗಳು.

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Permitted to Post under WPP System. Vide No.: WPP-87.
Posted at: Mail Business Centre, Bangalore GPO on 25, 28, 30 Every Month (No. of Pages : 4 + 24 = 28)



ಇತ್ತೀಚೆಗೆ ಶಿರಸಿ ಜಿಲ್ಲೆ ಆವೆ ಮರಿಯಾ ಪ್ರೌಢಶಾಲೆ ವತಿಯಿಂದ "ಸಹಸ್ರಲಿಂಗ" ಪ್ರದೇಶದಲ್ಲಿ ಏರ್ಪಡಿಸಿದ್ದ ಹೊರಸಂಚಾರದಲ್ಲಿ ಭಾಗವಹಿಸಿದ ಸ್ಕೌಟ್‌ಗಳು.



ಇತ್ತೀಚೆಗೆ ಚಿತ್ರದುರ್ಗ ಜಿಲ್ಲಾ ಸಂಸ್ಥೆಯ ವತಿಯಿಂದ ಲಾರ್ಡ್ ಬೇಡನ್ ಪೋವೆಲ್‌ರ ಜನ್ಮದಿನಾಚರಣೆಯ ಪ್ರಯುಕ್ತ ಏರ್ಪಡಿಸಿದ್ದ ರಂಗೋಲಿ ಸ್ಪರ್ಧೆಯಲ್ಲಿ ಭಾಗವಹಿಸಿದ ಗೈಡ್ಸ್‌ಗಳು.



ದಿನಾಂಕ 16.03.2013ರಂದು ಬೀದರ್‌ನ ಕನ್ನಿಕಾಪರಮೇಶ್ವರಿ ಹಿರಿಯ ಪ್ರಾಥಮಿಕ ಶಾಲೆ ಹಾಗೂ ಪ್ರೌಢಶಾಲೆ ವತಿಯಿಂದ ಏರ್ಪಡಿಸಿದ್ದ ಹೊರಸಂಚಾರ ಶಿಬಿರದ ಸಂದರ್ಭದಲ್ಲಿ ಚಿತ್ರಕಲಾ ಸ್ಪರ್ಧೆಯಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳು.



ಮಾರ್ಚ್ 29ರಿಂದ 31ರವರೆಗೆ ಮಂಗಳೂರಿನಲ್ಲಿ ನಡೆದ ದಳರಾತ್ರಿ ತಂಗುವ ಶಿಬಿರದ (Overnight Camp) ಸಂದರ್ಭದಲ್ಲಿ ಅಗ್ರಗಾಮಿ (Pioneering) ಚಟುವಟಿಕೆಗಳಲ್ಲಿ ತೊಡಗಿರುವ ಸ್ಕೌಟ್ಸ್-ಗೈಡ್ಸ್‌ಗಳು.



SCOUTS®
Creating a Better World



If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd.,**
**16/1, 3rd Cross, 2nd Main, Kasturiba Nagar, Mysore Road, Bangalore - 560 026**

